KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಮಾರ್ಚ್ ೮, ೨೦೦೭ (ಫಾಲ್ಗುಣ ೧೭, ಶಕ ವರ್ಷ ೧೯೨೮) | ಸಂಚಿಕೆ ೧೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶ್ರೀ ಎ.ಕೆ. ಬಸವರಾಜಪ್ಪ, ಸಹಾಯಕ ನಿರ್ದೇಶಕರು (ತರಬೇತಿ) ಕೇಂದ್ರ ಕಚೇರಿ, ಬೆಂಗಳೂರು ಇವರಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಕಸನಿ/138/ಸಿಬ್ಬಂದಿ/2001-02 ದಿನಾಂಕ 4.11.2002ರ ಅಧಿಕೃತ ಜ್ಞಾಪನ.
2. ಕಸನಿ/3/ಸಿಬ್ಬಂದಿ/2003-04 ದಿನಾಂಕ 6.9.2003ರ ಅಧಿಕೃತ ಜ್ಞಾಪನ.
3. ಸರ್ಕಾರದ ಅಧಿಸೂಚನೆ ಸಂ: ಸಂಕಇ/94/ಕಸನಿ/2004 ದಿನಾಂಕ 24.12.2004.
4. ಕಸನಿ/80/ಸಿಬ್ಬಂದಿ/2004-05 ದಿನಾಂಕ 29.12.2004ರ ಅಧಿಕೃತ ಜ್ಞಾಪನ.
5. ಕಸನಿ/110/ಸಿಬ್ಬಂದಿ/2004-05ರ ಅಧಿಕೃತ ಜ್ಞಾಪನ ದಿನಾಂಕ: 18.08.2006.
6. ಪತ್ರ ಸಂಖ್ಯೆ: ಕಸನಿ 110/ಸಿಬ್ಬಂದಿ/2004 ದಿನಾಂಕ: 18.8.2006.

**ಪ್ರಸ್ತಾವನೆ:**

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ ಅಧೀಕ್ಷಕರಾಗಿದ್ದ ಶ್ರೀ ಎ.ಕೆ. ಬಸವರಾಜಪ್ಪ ಇವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ: 4.11.2002ರ ಅಧಿಕೃತ ಜ್ಞಾಪನದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿಡಲಾಯಿತು. ಅದರಂತೆ ದಿನಾಂಕ: 7.11.2002 ರಿಂದ 6.5.2003ರವರೆಗೆ ಸದರಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿದ ಅವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 6.9.2003ರ ಅಧಿಕೃತ ಜ್ಞಾಪನದಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಡಿ ವರ್ಗಾಯಿಸಲಾಯಿತು. ಅಲ್ಲಿ ದಿನಾಂಕ: 9.9.2003 ರಿಂದ ಕಾರ್ಯ ನಿರ್ವಹಿಸಿದ ಅವರು ಮೇಲೆ (3)ರಲ್ಲಿ ಓಲಾದ ದಿನಾಂಕ: 24.12.2004ರ ಅಧಿಸೂಚನೆಯಲ್ಲಿ ಸಹಾಯಕ ನಿರ್ದೇಶಕ ಹುದ್ದೆಗೆ ಪದೋನ್ನತಿ ಹೊಂದಿ ದಿನಾಂಕ: 29.12.2004 ರಂದು ವರದಿ ಮಾಡಿಕೊಂಡರು. ಆಯುಕ್ತರು ನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (5)ರಲ್ಲಿ ಓದಲಾದ ದಿನಾಂಕ: 18.8.2006ರ ಪತ್ರದಲ್ಲಿ ಇಲಾಖಾ ಮುಖ್ಯಸ್ಥರಿಗೆ ದತ್ತವಾದ ಅಧಿಕಾರದನ್ವಯ ಶ್ರೀಯುತರಿಗೆ ದಿನಾಂಕ: 7.11.2002 ರಿಂದ 6.5.203ರವರೆಗೆ 6 ತಿಂಗಳ ಅವಧಿಗೆ ಮೇಲೆ ಕ್ರಮ ಸಂಖ್ಯೆ.5ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದೆ ಎಂದು ತಿಳಿಸಿ ಉಳಿದ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 124 ಕಸನಿ 2006, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2007**

ಶ್ರೀ ಎ.ಕೆ. ಬಸವರಾಜಪ್ಪ ಸಹಾಯಕ ನಿರ್ದೇಶಕರು ಬೆಂಗಳೂರು ಇವರಿಗೆ ದಿನಾಂಕ: 7.5.2003 ರಿಂದ 8.9.2003 ರವರೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಹಾಗೂ ದಿನಾಂಕ: 9.9.2003 ರಿಂದ 28.12.2004ರವರೆಗೆ ಕನ್ನಡ ಪುಸ್ತಕ ಪ್ರಾಧಿಕಾರದ

ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ್ದಕ್ಕಾಗಿ ಕೆ.ಸಿ.ಎಸ್.ಆರ್. ನಿಯಮ 68ರ ಮೇರೆಗೆ ಸಹಾಯಕ ನಿರ್ದೇಶಕ ಹುದ್ದೆಯ ವೇತನ ಶ್ರೇಣಿ 6000-11200ರ ಕನಿಷ್ಠ ರೂ.6000-00ದ ಶೇಕಡ 5 ರಷ್ಟನ್ನು ಪ್ರಭಾರ ಭತ್ಯೆಯನ್ನಾಗಿ ಈ ಮೂಲಕ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 291

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ENERGY SECRETARIAT

**Sub :** Exemption from the collection of service Tax on Technical Inspection and certification rendered by Department of Electrical Inspectorate - reg.

**Read :** 1) Government letter No. EN 64 EBS 2005 dated 6.1.2006.
2) Chief Electrical Inspector to Govt. Letter No. CEIG/EI(A)/124 dated 22.12.2006.
3) Chief Electrical Inspector to Govt. Letter No. CEIG/134/2006-07 dated 31.1.2007.

**Preamble:**

In Government Order read at (1) above, Chief Electrical Inspector to Govt. has been directed to collect the Service Tax at the rate of 10% and 2% Education Cess on Sevice Tax for the service rendered by the Department of Electrical Inspectorate on technical inspection and certification.

The Chief Electrical Inspector to Govt. in his letter read at (2) above has requested the Govt. to exempt the Department of Electrical Inspectorate from the collection of Service Tax as per the Circular No.89/7/2006- Service Tax dated 18.12.2006 (F.N.255/1/06-CX-4 dated 18.12.2006) issued by Government of India, Ministry of Finance, Department of Revenue (Central Board of Excise and Customs).

The Chief Electrical Inspector to Govt. has requested the Commissioner of Service Tax, Lalbagh Road, Bangalore on 4.1.2007 to exempt the Department from the purview of Service ax as per the Circular dated 18.12.2006 and also requested for the refund of the amount of Rs.2,45,02,381/- remitted for the period from 1.7.2003 to 6.1.2006 which has not been collected from the end consumers.

In turn, the Joint Commissioner has addressed a letter to Chief Electrical Inspector on 23.1.2007 and informed the CEIG to file an application to refund the Service Tax in the prescribed format with the Assistant Commissioner of Service Tax I Division, Bangalore who will deal with the same in accordance with law if your Department functions similar to those described in para 2 of the Board's Circular dated 18.12.2006.

In view of the correspondence between the Chief Electrical Inspector and the Joint Commissioner, Service Tax, the Chief Electrical Inspector in his letter read at (3) above has again requested the Govt. to issue necessary Govt. Orders exempting the Department of Electrical Inspectorate from the collection of service Tax from the consumers and to issue directions to stop the collection of Service Tax from the end consumers w.e.f. 1.2.2007.

The matter has been examined in detail at Govt. level and following orders has been issued.

**Government Order No. EN 64 EBS 2005, Bangalore, Dated: 31st January 2007**

As per the Circular No. 89/7/06-Service Tax dated 18.12.2006 issued by the Commissioner (Service Tax), Ministry of Finance, Government of India, the Department of Electrical Inspectorate is hereby exempted from the collection of Service Tax from the consumers with immediate effect and until further orders as the Department of Electrical Inspectorate performs certain functions/duties particularly Technical Inspection and Certification on Electrical Installations which are statutory in nature. These functions are performed in terms of specific responsibility assigned to them under the law in force.

Further, the Chief Electrical Inspector to Govt. is directed to file on application before the Assistant Commissioner of Service Tax I Division, Bangalore for claiming of refund of service Tax for the period from 1.7.2003 to 6.1.2006 in the prescribed format immediately.

This order is issued with the concurrence of Department of Law, Justice & Human Rights vide their U.O. Note No. LAW 26 OPN 2007 dated 29.1.2007.

By Order and in the name of the Governor of Karnataka,

**SUJATAMMA**

P.R. 258

Desk Officer,

Energy Department.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಅಣೆಕಟ್ಟು ಸುರಕ್ಷತಾ ಪರಿಶೀಲನಾ ಸಮಿತಿಯನ್ನು (Dam Safety Review Panel) ಪುನರಚಿಸಿ, ಸದಸ್ಯರಿಗೆ ನೀಡುವ ಸಭಾ ಭತ್ಯೆಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರಿ ಆದೇಶ ಸಂಖ್ಯೆ: ನೀಇ 35 ಎಂಎಂಜಿ 96, ಬೆಂಗಳೂರು, ದಿನಾಂಕ: 9-7-1999.

2 ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೆ.ಆರ್.ಸಾಗರಂ ಇವರ ಪತ್ರಗಳ ದಿ:14-9-99, 3-11-99, 22-11-99, 11-5-2000 ಮತ್ತು 22-5-2000.

3 ಸರ್ಕಾರಿ ಆದೇಶ ಸಂಖ್ಯೆ: ನೀಇ 55 ಕಾವಿಇ 99 (ಭಾ-1), ಬೆಂಗಳೂರು ದಿ: 13-9-2000.

4 ಸರ್ಕಾರಿ ಆದೇಶ ಸಂಖ್ಯೆ: ನೀಇ 55 ಕಾವಿಇ 99 (ಭಾ-1), ಬೆಂಗಳೂರು ದಿ: 13-11-2000.

5 ಶ್ರೀ.ವೆಂಕಟರಮಣ, ನಿವೃತ್ತ, ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೆ.ಆರ್.ಸಾಗರ ಇವರ ಪತ್ರ ದಿ:9-12-2002.

6 ಸರ್ಕಾರಿ ಆದೇಶ ಸಂಖ್ಯೆ: ಜಸಂಇ 18 ಇಂಸಂಕೇ 2002 (ಭಾ-1), ಬೆಂಗಳೂರು ದಿ: 29-1-03.

7 ಸರ್ಕಾರಿ ಆದೇಶ ಸಂಖ್ಯೆ: ಜಸಂಇ 30 ಇಂಸಂಕೇ 2004, ಬೆಂಗಳೂರು ದಿ: 27-12-04.

8 ಡಾ. ವೈ.ಕೆ. ಮೂರ್ತಿ, ಅಧ್ಯಕ್ಷರು, ಕರ್ನಾಟಕ ರಾಜ್ಯ ಅಣೆಕಟ್ಟು ಸುರಕ್ಷತಾ ಸಮಿತಿ, ರವರ ಪತ್ರ ದಿನಾಂಕ: 7-7-06.

9 ಡಾ. ವೈ.ಕೆ. ಮೂರ್ತಿ, ಅಧ್ಯಕ್ಷರು, ಕರ್ನಾಟಕ ರಾಜ್ಯ ಅಣೆಕಟ್ಟು ಸುರಕ್ಷತಾ ಸಮಿತಿ, ರವರ ಪತ್ರ ದಿನಾಂಕ: 9-9-06.

10 ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೆ.ಆರ್.ಸಾಗರ ಇವರ ಪತ್ರಗಳ ಸಂಖ್ಯೆಗಳು: 5297-300/ದಿ: 28-10-04, 5509-12/6-11-04, 6053-54/26-11-04, 6285/4-12-04.

**ಪ್ರಸ್ತಾವನೆ:**

ಕೇಂದ್ರ ಜಲ ಆಯೋಗದ ಅಣೆಕಟ್ಟು ಸುರಕ್ಷತಾ ಕಾರ್ಯ ವಿಧಾನದ ವರದಿಯ ಅನುಸಾರ ರಾಜ್ಯಗಳು ತಮ್ಮಲ್ಲಿರುವ 15 ಮೀಟರ್‌ಗಿಂತ ಎತ್ತರವಿರುವ ಅಣೆಕಟ್ಟುಗಳು ಅಥವಾ 60 ಮಿಲಿಯನ್ ಘನ ಮೀಟರ್‌ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು 10 ವರ್ಷಗಳಿಗೆ ಒಂದು ಬಾರಿ ಪರಿಶೀಲಿಸುವ ಸಲುವಾಗಿ ಒಂದು ಶಾಶ್ವತವಾದ ತಜ್ಞರ ಸಮಿತಿಯನ್ನು ನೇಮಿಸಬೇಕಾಗಿದ್ದು, ಅದರಂತೆ ರಾಜ್ಯದಲ್ಲಿರುವ ಅಣೆಕಟ್ಟುಗಳ ಸುರಕ್ಷತೆ ಪರಿಶೀಲಿಸುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಡಾ|| ವೈ.ಕೆ.ಮೂರ್ತಿ, ಮಾಜಿ ಅಧ್ಯಕ್ಷರು, ಕೇಂದ್ರ ಜಲ ಆಯೋಗ ಇವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯನ್ನು ರಚಿಸಲಾಗಿದೆ. ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಇವರ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರಗಳಲ್ಲಿ ಈ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದು, ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ 'ಅ ರಿಂದ ಎ' ವರೆಗೆ ಒಟ್ಟು 9 ನಿಬಂಧನೆಗಳಿಗೆ ಒಳಪಟ್ಟಂತೆ ಆದೇಶ ಹೊರಡಿಸಲಾಗಿದೆ. ಹಾಗೂ, ಮೇಲೆ ಓದಲಾದ ಕ್ರಮ ಸಂಖ್ಯೆ (4) (6) ಹಾಗೂ (7) ರಲ್ಲಿ. ಸದರಿ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಇಲ್ಲದೆ, ಸಮಿತಿಯ ಸದಸ್ಯರುಗಳಲ್ಲಿ ಮಾರ್ಪಾಟ್ಟು ಮಾಡಿ, ಆದೇಶ ಹೊರಡಿಸಲಾಗಿದೆ.

2. ಈ ವಿಷಯ ಕುರಿತು, ಕ್ರಮ ಸಂಖ್ಯೆ (8) ಹಾಗೂ (9)ರಲ್ಲಿ ಓದಲಾದ ಪತ್ರಗಳಲ್ಲಿ, ರಾಜ್ಯ ಅಣೆಕಟ್ಟು ಸುರಕ್ಷತಾ ಸಮಿತಿಯ ಅಧ್ಯಕ್ಷರಾದ ಡಾ. ವೈ.ಕೆ. ಮೂರ್ತಿರವರು, ಸಮಿತಿಯ ತಪಾಸಣೆಗೆ ಒಳಪಡಿಸ ಬೇಕಾದ ಅಣೆಕಟ್ಟುಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಬಾಕಿ ಇರುವುದರಿಂದ, ಒಬ್ಬ ಗೇಟ್ ತಜ್ಞ ಹಾಗೂ ಒಬ್ಬ ಅನುಭವಿ ಭೂ ವಿಜ್ಞಾನಿ ರವರ ನೆರವಿನೊಂದಿಗೆ ಮುಖ್ಯ ಅಭಿಯಂತರ ನೇತೃತ್ವದಲ್ಲಿ ಆಂತರಿಕ ಅಣೆಕಟ್ಟು ಸುರಕ್ಷತಾ ತಂಡಗಳನ್ನು ರಚಿಸಬೇಕೆಂದು ಸಲಹೆ ನೀಡಿರುತ್ತಾರೆ. ಸದರಿ ತಂಡಗಳು ನೀಡುವ ವರದಿಯನ್ನು, ಡಾ. ವೈ.ಕೆ. ಮೂರ್ತಿ ರವರ ಅಧ್ಯಕ್ಷತೆಯಲ್ಲಿ ಡಿ.ಎಸ್.ಆರ್.ಪಿ.ಯು ಪರಿಶೀಲಿಸಿ, ಗಂಭೀರತೆ ಇರುವ ಅಂಶಗಳನ್ನು ಗುರುತಿಸಿ ಸರ್ಕಾರಕ್ಕೆ ಅಂತಿಮ ಶಿಫಾರಸ್ಸುಗಳನ್ನು ಸಲ್ಲಿಸುವುದಾಗಿ ಸೂಚಿಸಿರುತ್ತಾರೆ. ಈ ಆಂತರಿಕ ಸಮಿತಿಗಳನ್ನು ಕುರಿತು ಸರ್ಕಾರದಲ್ಲಿ ಪರಿಶೀಲಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಲಾಗುವುದು. ಮುಂದುವರೆದು, ಡಾ. ವೈ.ಕೆ. ಮೂರ್ತಿರವರು, ರಾಜ್ಯದ ಅಣೆಕಟ್ಟುಗಳ ಗೇಟುಗಳ ಪರಿವೀಕ್ಷಣೆಗಾಗಿ ಪ್ರತ್ಯೇಕವಾಗಿ ರಚಿಸಲಾದ ಗೇಟ್ಸ್ ಸಮಿತಿಯನ್ನು ಹಾಲಿ ಡಿ.ಎಸ್.ಆರ್.ಪಿ., ಜೊತೆ ವಿಲೀನ ಗೊಳಿಸಲು ಸಲಹೆ ನೀಡಿ, ಕಾರ್ಯಭಾರದೊಂದಿಗೆ ಗೇಟ್ಸ್ ಸಮಿತಿಯ ಸದಸ್ಯರನ್ನು ಡಿ.ಎಸ್.ಆರ್.ಪಿ.ಗೆ ಸೇರ್ಪಡಿಸಲು ಸೂಚಿಸಿರುತ್ತಾರೆ.

3. ಮುಂದುವರೆದು, ಕ್ರಮ ಸಂಖ್ಯೆ (10) ರಲ್ಲಿ ಓದಲಾದ ಪತ್ರಗಳಲ್ಲಿ, ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೆ.ಆರ್.ಸಾಗರಂ ರವರು, ಹಾಲಿ ಹೊರಡಿಸಲಾಗಿರುವ ಸರ್ಕಾರಿ ಆದೇಶಗಳು ದಿ: 9-7-99 ಹಾಗೂ 13-9-2000 {ಕ್ರ.ಸಂ.(1) ಮತ್ತು (3)} ರಲ್ಲಿ, ಸಮಿತಿಯ ಸದಸ್ಯರಿಗೆ ದಿನವೊಂದಕ್ಕೆ 300 ರೂ. (ಮುನ್ನೂರು ರೂಪಾಯಿಗಳು ಮಾತ್ರ) ಗಳಂತೆ ಸಭಾ ಭತ್ಯೆಯನ್ನು ನೀಡಿರುವ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿ, ಮನವಿ ಸಲ್ಲಿಸುತ್ತ, ದಿ: 19-10-04 ರಂದು, ಬೆಂಗಳೂರಿನಲ್ಲಿ ನಡೆದ ರಾಷ್ಟ್ರೀಯ ಅಣೆಕಟ್ಟುಗಳ ನಡವಳಿಗಳ ಸಭೆಯಲ್ಲಿ ತೀರ್ಮಾನಿಸಿದಂತೆ, ವಿವಿಧ ರಾಜ್ಯಗಳಲ್ಲಿ ಅಣೆಕಟ್ಟು ಸುರಕ್ಷತಾ ಪರಿಶೀಲನಾ ಸಮಿತಿಯ ಸದಸ್ಯರಿಗೆ ನೀಡಲಾಗುತ್ತಿರುವ ಸಭಾ ಭತ್ಯೆಗೆ ಅನುಗುಣವಾಗಿ, ಈ ರಾಜ್ಯದಲ್ಲಿ ನೇಮಿಸಿರುವ ಅಧಿಕಾರೇತರ ಸದಸ್ಯರಿಗೂ ಸಹ ಸಭಾ ಭತ್ಯೆಯನ್ನು ಹೆಚ್ಚಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಹಾಗೂ ಡಾ: ವೈ.ಕೆ. ಮೂರ್ತಿರವರ ಸಲಹೆಗಳನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 35 ಇಂಸಂಕೇ 2004 ಬೆಂಗಳೂರು, ದಿನಾಂಕ: 23ನೇ ಜನವರಿ 2007**

I. ಸರ್ಕಾರಿ ಆದೇಶ ಸಂಖ್ಯೆ ಜಸಂಇ 40 ಇಂಸಂಕೇ 2005, ಬೆಂಗಳೂರು, ದಿನಾಂಕ: 15–11–05ರಲ್ಲಿ, ಎಲ್ಲಾ ಭಾರಿ ಅಣೆಕಟ್ಟುಗಳ ಗೇಟುಗಳನ್ನು ಪರಿವೀಕ್ಷಿಸಲು ರಚಿಸಲಾದ ವಿಶೇಷ ಸಮಿತಿಯನ್ನು ಈ ಮೂಲಕ ರದ್ದುಪಡಿಸುತ್ತಾ, ಸದರಿ ಗೇಟ್ಸ್ ಸಮಿತಿಯ ಸದಸ್ಯರನ್ನೊಳಗೊಂಡಂತೆ ರಾಜ್ಯದಲ್ಲಿನ 15 ಮೀಟರ್‌ಗಿಂತ ಎತ್ತರವಿರುವ ಅಥವಾ 60 ಮಿಲಿಯನ್ ಘನ ಮೀಟರ್‌ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು ಪರಿಶೀಲಿಸುವ ಸಲುವಾಗಿ ರಚಿಸಲಾಗಿರುವ್ ತಜ್ಞರ ಸಮಿತಿಯನ್ನು ಕೆಳಕಂಡಂತೆ ಪುನರ್ ರಚಿಸಲಾಗಿದೆ. ಹಾಗೂ, ರದ್ದುಪಡಿಸಲಾಗುವ ವಿಶೇಷ ಸಮಿತಿಯ ಕಾರ್ಯಭಾರವನ್ನು ಈ ಸಮಿತಿಗೆ ವಹಿಸಲಾಗಿದೆ.

| ಕ್ರ.ಸಂ | ತಜ್ಞರ ಹೆಸರು | ಪರಿಣಿತರ ವಿಷಯ | |
|---|---|---|---|
| 1. | ಡಾ|| ವೈ.ಕೆ. ಮೂರ್ತಿ,<br>ಮಾಜಿ ಅಧ್ಯಕ್ಷರು, ಕೇಂದ್ರ ಜಲ ಆಯೋಗ<br>"ಚಂಪ' ಡಿ–44, ಗುಲ್‌ಮೋಹರ್ ಪಾರ್ಕ್,<br>ನವದೆಹಲಿ–110 049 | ಡ್ಯಾಂ ಕನ್‌ಸ್ಟ್ರಕ್ಷನ್<br>ಇಂಜಿನಿಯರಿಂಗ್<br>ಅಂಡ್<br>ಮ್ಯಾನೇಜ್‌ಮೆಂಟ್ | ಅಧ್ಯಕ್ಷರು |
| 2. | ಶ್ರೀ.ಕಾಂಬ್ಲೆ. ವೈ.ಎಸ್,<br>ಮುಖ್ಯ ಇಂಜಿನಿಯರ್ (ನಿವೃತ್ತ),<br>ಶರಣ ಕುಟೀರ್, ನಂ.1760,<br>ಕರಡಿ ಬಗೀಚ, ಬಿಜಾಪುರ–586 101 | ವಾಟರ್ ರಿಸೋರ್ಸ್‌ಸ್<br>ಅಂಡ್<br>ಇಂಜಿನಿಯರಿಂಗ್ | ಸದಸ್ಯರು |
| 3. | ಶ್ರೀ.ಎಂ.ಬಿ. ಪರಪ್ಪಗೌಡರ್,<br>ಪ್ರಧಾನ ಇಂಜಿನಿಯರ್ (ನಿವೃತ್ತ),<br>ಬಸವ ಕೃಪ, ಶಿವಗಿರಿ, ಜಯನಗರ,<br>ಧಾರವಾಡ–580 007 | ಅರ್ಥನ್ ಡ್ಯಾಂ | ಸದಸ್ಯರು |
| 4. | ಶ್ರೀ.ಎಸ್.ಬಿ. ಕೊಯಮತ್ತೂರು,<br>ಅಧೀಕ್ಷಕ ಇಂಜಿನಿಯರ್ (ನಿವೃತ್ತ),<br>ಕೊಯಮತ್ತೂರು ಲೇಔಟ್,<br>ಕೆನರಾ ಬ್ಯಾಂಕ್ ಹಿಂಭಾಗ,<br>ನಾರಾಯಣಪುರ, ಧಾರವಾಡ–580 008 | ಡ್ಯಾಂ ಸೇಫ್ಟಿ<br>ಸರ್ವೈಲೆನ್ಸ<br>ಮೇಸನರಿ:ಕಾಂಕ್ರೀಟ್<br>ಡ್ಯಾಂ | ಸದಸ್ಯರು |
| 5. | ಶ್ರೀ.ವೈ. ಆದಿನಾರಾಯಣ ಶಾಸ್ತ್ರಿ,<br>ಮ್ಯಾನೇಜಿಂಗ್ ಡಾರೈಕ್ಟರ್ (ನಿವೃತ್ತ),<br>ಪ್ಲಾಟ್ ನಂ.7, ಸೀತಾರಾಮನಗರ,<br>ಗನ್ ರಾಕ್, ಸಿಖ್ ವಿಲೇಜ್,<br>ಸಿಕಂದರಾಬಾದ್–500 009 | ಗೇಟ್ಸ್ ಅಂಡ್<br>ಹಾಯಿಸ್ಟ್ಸ | ಸದಸ್ಯರು |
| 6. | ಶ್ರೀ.ಕೆ.ಎಸ್. ಕೃಷ್ಣಮೂರ್ತಿ,<br>ಮಾಜಿ ನಿರ್ದೇಶಕರು,<br>ಜಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ | ಇಂಜಿನಿಯರಿಂಗ್<br>ಜಿಯಾಲಜಿ | ಸದಸ್ಯರು |
| 7. | ಶ್ರೀ. ಎಸ್. ಬಾಲಸುಬ್ರಮಣ್ಯಂ,<br>ನಿರ್ದೇಶಕರು (ನಿ),<br>ಕೇಂದ್ರ ಜಲ ಆಯೋಗ,<br>ನಂ.155, 3ನೇ ಘಟಕ, 6ನೇ ಮುಖ್ಯ ರಸ್ತೆ,<br>ಜೆ.ಪಿ.ನಗರ, ಬೆಂಗಳೂರು–79 | ಡ್ಯಾಂ ಡಿಸೈನ್ &<br>ಕನ್ಸಟ್ರಕ್ಷನ್ ಆಫ್<br>ಹೈಡ್ರೋ ಎಲೆಕ್ಟ್ರಿಕ್<br>ಪ್ರಾಜೆಕ್ಟ್ಸ ಅಂಡ್<br>ಮ್ಯಾನೇಜ್ಮೆಂಟ್ | ಸದಸ್ಯರು |
| 8. | ನಿರ್ದೇಶಕರು,<br>ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ<br>ಕೇಂದ್ರ, ಕೆ.ಆರ್.ಸಾಗರ | | ಖಾಯಂ<br>ಆಹ್ವಾನಿತರು |
| 9. | ಅಧೀಕ್ಷಕ ಅಭಿಯಂತರರು,<br>ಉಸ್ತುವಾರಿ ಮತ್ತು ಮೌಲ್ಯಮಾಪನ,<br>ಬಸವ ಭವನ, ಬಸವೇಶ್ವರ ರಸ್ತೆ,<br>ಬೆಂಗಳೂರು–1 | | ಸಮಾವೇಶಕರು |

II. ಈ ಸಮಿತಿಯು ಕೆಳಕಂಡ ನಿಬಂಧನೆಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತದೆ.

ಅ. ಸಮಿತಿಯು ಕೇಂದ್ರ ಜಲ ಆಯೋಗದ ಅಣೆಕಟ್ಟು ಸುರಕ್ಷಣಾ ಕಾರ್ಯ ವಿಧಾನದ ವರದಿಯ ಕಂಡಿಕೆ 4.3.1.6 ರಲ್ಲಿ ನಮೂದಿಸಿರುವಂತೆ ಅಣೆಕಟ್ಟು ಸುರಕ್ಷತೆಗೆ ಸಂಬಂಧಿಸಿದಂತೆ ರಾಜ್ಯದಲ್ಲಿನ 15 ಮೀಟರ್ ಗಿಂತ ಎತ್ತರವಿರುವ ಅಣೆಕಟ್ಟುಗಳು ಮತ್ತು 60 ಮಿ.ಘ.ಮೀ.ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು 10 (ಹತ್ತು) ವರ್ಷಗಳಿಗೊಮ್ಮೆ ಪರಿಶೀಲಿಸುತ್ತದೆ. (ಅಣೆಕಟ್ಟುಗಳ ಪಟ್ಟಿಯನ್ನು ಪ್ರತ್ಯೇಕವಾಗಿ

ಘೋಷಿಸಲಾಗುವುದು) ಸಮಿತಿಯು ಅಡಕ (1) ರಲ್ಲಿನ 'Terms of Reference' ಅನ್ನು ಅನುಸರಿಸುತ್ತದೆ.

ಆ. ಜಲಸಂಪನ್ಮೂಲ ಇಲಾಖೆಯ ಕಾರ್ಯದರ್ಶಿ ಹಾಗೂ ಉಪ ಕಾರ್ಯದರ್ಶಿ ಯವರನ್ನೊಳಗೊಂಡ ಕೇಂದ್ರ ಕಾರ್ಯಕಾರಿ ತಂಡವು ಸಮಿತಿಯು ಕೈಗೊಳ್ಳಬೇಕಾದ ಪರಿವೀಕ್ಷಣೆಗೆ ಅಣೆಕಟ್ಟುಗಳ ಆಧ್ಯತಾ ಪಟ್ಟಿಗೆ ಅನುಮೋದನೆ ನೀಡುವುದು.

ಇ. ಸಮಿತಿಯು ಯೋಜನೆಗಳನ್ನು ಪರಿವೀಕ್ಷಣೆ ಮಾಡುವ ಸಂಧರ್ಭಗಳಲ್ಲಿ ಸಂಬಂಧಪಟ್ಟ ಮುಖ್ಯ ಇಂಜಿನಿಯರ್‌ರವರು, ಸಮಿತಿಯ ಸದಸ್ಯರ ಪ್ರವಾಸಕ್ಕೆ ಎಲ್ಲಾ ವ್ಯವಸ್ಥೆಗಳನ್ನು ಮಾಡುವುದು.

ಈ. ಸಮಿತಿಯ ಅಧಿಕಾರೇತರ ಸದಸ್ಯರು ಪರಿವೀಕ್ಷಣೆಯ ನಿಮಿತ್ತ ಕೇಂದ್ರ ಸ್ಥಾನದಿಂದ ಹೊರಗಡೆ ಪ್ರಯಾಣ ಮಾಡಿದಾಗ ಪ್ರವಾಸ ಭತ್ಯೆ ಹಾಗೂ ದಿನ ಭತ್ಯೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಎಸ್ ಆರ್ ಎ 2000 ದಿ: 3–2–2001 ರಂತೆ ನಿಯಂತ್ರಿಸುವುದು. ಇದಲ್ಲದೆ, ಸಭೆಗಳಲ್ಲಿ ಭಾಗವಹಿಸಿದ/ಪರಿವೀಕ್ಷಣೆಯ ಸಂದರ್ಭದಲ್ಲಿ ಸಮಿತಿಯ ಅಧ್ಯಕ್ಷರಿಗೆ ಪ್ರತಿ ಬೇಟಿಗೆ ರೂ.7500/– (ಏಳು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಹಾಗೂ ಸಮಿತಿಯ ಅಧಿಕಾರೇತರ ಸದಸ್ಯರಿಗೆ ಪ್ರತಿ ಭೇಟಿಗೆ ರೂ.5000/– (ಐದು ಸಾವಿರ ರೂಪಾಯಿಗಳು) ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ. ಈ ಸಭಾ ಭತ್ಯೆಯನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/876/ಅಕೋ–1/2006 ದಿನಾಂಕ 16–10–06ರಲ್ಲಿ ನೀಡಿರುವ ಸಹಮತಿಯೊಂದಿಗೆ ನಿಗದಿಪಡಿಸಲಾಗಿದೆ.

ಉ. ಸಮಿತಿಯ ಅಧ್ಯಕ್ಷರಿಗೆ ಹಾಗೂ ಅಧಿಕಾರೇತರ ಸದಸ್ಯರಿಗೆ ದಿನ ಭತ್ಯೆ ಹಾಗೂ ಸಭಾ ಭತ್ಯೆಯನ್ನು ಲೆಕ್ಕ ಮಾಡಲು ಅವರ ನಿವಾಸದಿಂದ ಹೊರಟು ಮತ್ತೆ ಅವರ ನಿವಾಸಕ್ಕೆ ಹಿಂದಿರುಗುವವರೆಗಿನ ಅವಧಿಯನ್ನು 24 ಘಂಟೆಗಳ ಲೆಕ್ಕದಲ್ಲಿ ಪರಿಗಣಿಸಲಾಗುವುದು (6 ಘಂಟೆಗಳಿಗಿಂತ ಕಡಿಮೆ ಅವಧಿಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ).

ಊ. ಸಮಿತಿಯ ಅಧ್ಯಕ್ಷರಿಗೆ ಹಾಗೂ ಅಧಿಕಾರೇತಂ ಸದಸ್ಯರಿಗೆ ಪ್ರಯಾಣ ಭತ್ಯೆ ಮತ್ತು ಸಭಾ ಭತ್ಯೆಗಳ ವೆಚ್ಚವನ್ನು ಸಂಬಂಧಪಟ್ಟ ಯೋಜನೆಗಳಡಿಯಲ್ಲಿ ಭರಿಸತಕ್ಕದ್ದು. ಸಂಬಂಧಪಟ್ಟ ಮುಖ್ಯ ಇಂಜಿನಿಯರ್ ರವರು ಅಧಿಕಾರೇತರ ಸದಸ್ಯರ ಪ್ರಯಾಣ ಭತ್ಯೆ/ದಿನ ಭತ್ಯೆ, ಸಭಾ ಭತ್ಯೆಗಳ ಬಿಲ್ಲುಗಳನ್ನು ಮೇಲು ಸಹಿ ಮಾಡಿ (ಕೌಂಟರ್ ಸೈನ್) ಹಣ ಪಾವತಿ ಮಾಡಲು ಕ್ರಮ ಕೈಗೊಳ್ಳುವುದು.

ಋ. ತಜ್ಞರ ಸಮಿತಿಯ ಅಧ್ಯಕ್ಷರು ಪರಿವೀಕ್ಷಣಾ ವರದಿಯನ್ನು ಅಂತಿಮಗೊಳಿಸಿ ಭಾಗವಹಿಸಿದ ಎಲ್ಲಾ ಸದಸ್ಯರುಗಳ ಸಹಿಯೊಡನೆ (ಅಧ್ಯಕ್ಷರ ಸಹಿಯನ್ನೊಳಗೊಂಡಂತೆ) ವರದಿಯನ್ನು ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ರವರಿಗೆ ಕಳುಹಿಸಿ ಪ್ರತಿಯನ್ನು ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೆ.ಆರ್.ಸಾಗರ ಮತ್ತು ಸಂಬಂಧಪಟ್ಟ ಮುಖ್ಯ ಇಂಜಿನಿಯರ್ ರವರಿಗೆ ಕಳುಹಿಸುವುದು.

ಎ. ಒಂದು ವೇಳೆ ಹೊರ ಏಜನ್ಸಿಯಿಂದ ತಜ್ಞ ಸಲಹೆಯು ಅಗತ್ಯವಾದಲ್ಲಿ, ಕೇಂದ್ರ ಕಾರ್ಯಕಾರಿ ಸಮಿತಿಯು, ಈ ಸಮಿತಿಯ ತಜ್ಞರಿಗೆ ಅನ್ವಯವಾಗುವ ನಿಬಂಧನೆ ಮತ್ತು ಷರತ್ತುಗಳನ್ನೇ ಅನುಸರಿಸಲು ಸೂಕ್ತ ಕ್ರಮ ಕೈಗೊಳ್ಳುವುದು ಮತ್ತು ವಿಶೇಷ ಸಲಹೆಗಳನ್ನು ನೀಡುವ ಏಜನ್ಸಿಗೆ ಪಾವತಿಸಬೇಕಾದ ಮೊಬಲಗನ್ನು ಮೇಲೆ ನಿಗಧಿಪಡಿಸಿದ ಅಂಶಗಳ ಪ್ರಕಾರ ನಿಗಧಿಪಡಿಸುವುದು. ಹಾಗೆ ಸಾಧ್ಯವಾಗದಿದ್ದಲ್ಲಿ, ಕೇಂದ್ರ ಕಾರ್ಯಕಾರಿ ಸಮಿತಿಯು ಸೂಕ್ತ ರೀತಿಯಲ್ಲಿ ವಿಷಯವನ್ನು ಅಂತಿಮಗೊಳಿಸುವುದು.

ಏ. ತಜ್ಞರ ಸಮಿತಿಯು ಗುರಿ ಸಾಧಿಸಲು ನಿರ್ಧಿಷ್ಟ ಕಾಲಾವಧಿಯಲ್ಲಿ ಕಾರ್ಯ ನಿರ್ವಹಿಸಬೇಕಾಗಿರುವುದರಿಂದ ಯಾವುದೇ ನಿರ್ಧಿಷ್ಟ ಸಮಸ್ಯೆಯನ್ನು ಪರೀಕ್ಷಿಸಲು ಸಮಿತಿಯ ಎಲ್ಲಾ ಸದಸ್ಯರ ಗಮನ ಅವಶ್ಯವಿಲ್ಲದಿರುವ ಸಂದರ್ಭಗಳಲ್ಲಿ ಅಥವಾ ಕೆಲವು ಸಂದರ್ಭಗಳಲ್ಲಿ ಯಾವುದೇ ಒಬ್ಬ ತಜ್ಞರ ಕಾರ್ಯಕ್ಷೇತ್ರದಲ್ಲಿ ಸಮಸ್ಯೆಯನ್ನು ವಿವರವಾಗಿ ತನಿಖೆ ಮಾಡುವ ಅಗತ್ಯ ಒದಗಬಹುದು. ಅಂತಹ ಸಂದರ್ಭಗಳಲ್ಲಿ ಕೇಂದ್ರ ಕಾರ್ಯಕಾರಿ ತಂಡವು ಸೂಕ್ತ ಕ್ರಮ ಕೈಗೊಳ್ಳುವುದು.

ಈ ಮೇಲಿನ ಆದೇಶವು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ. ಹಾಗೂ, ಈ ವಿಷಯ ಕುರಿತು, ಈ ಹಿಂದೆ ಹೊರಡಿಸಲಾದ ಎಲ್ಲಾ ಸರ್ಕಾರದ ಆದೇಶಗಳನ್ನು ಅಧಿಕ್ರಮಿಸಲಾಗಿದೆ (Superceded.)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಪರಶುರಾಮ್**

ಸರ್ಕಾರದ ಉಪ ಕಾರ್ಯದರ್ಶಿ (ಕೃಭಾಜನಿ)

ಜಲಸಂಪನ್ಮೂಲ ಇಲಾಖೆ

## WATER RESOURCES SECRETARIAT

**Sub:** Reconstitution of Dam Safety Review Panel(DSRP) and refixation of sitting fee payable to members- Reg.

**Read:**
1) Govt. Order No. ID 35 MMG 96, dated: 9.7.99.
2) Lts. from Director, KERS, K.R.Sagar dated: 14.9.99. 3.11.99, 22.11.99 11.5.2000 and 22-5-2000.
3) Govt Order No. ID 55 Ka Vi Ee 99(Part-1) Bangalore dt. 13-9-00.
4) Govt Order No. ID 55 Ka Vi Ee 99(Part-1) Bangalore dt. 13-11-00.
5) Ltr from Sri Venkataramana, Director (Retd) KERS, KR Sagar, dt. 9-12-02.
6) Govt Order No. WRD 18 Im Sam Kay 2002 (Part-1) Bangalore dt. 29-1-03.
7) Govt Order No. WRD 30 Im Sam Kay 2004 Bangalore dt. 27-12-04.
8) Ltr from Dr. Y.K. Murthy, Chairman DSRP, dt. 7-7-06.

9) Ltr from Dr. Y.K. Murthy, Chairman DSRP, dt. 9-9-06.
10) Ltrs from Director, KERS, K.R.Sagar No. 5297-300 dt 28-10-04, 5509-12 dt 6-11-04, 6053-54 dt 26-11-04 and 6285 dt 4-12-04.

**PREAMBLE:**

As per the report published on Dam Safety proceedings published by the Central Water Commission, the States have to constitute a standing panel of experts for safety review of all dams which are more than 15 mtrs in height or which store 60 $MM^3$ or more of water, once in 10 (ten) years. Accordingly, vide Government Order read at Sl.No.(1) above, an expert panel had been constituted for safety review of dams in the State under the chairmanship of Dr. Y.K. Murthy, Former Chairman, Central Water Commission. The Director, Karnataka Engineering Research Station, K.R. Sagar, vide letters read at Sl.No.(2) above, had submitted proposals for reconstitution of this panel which were examined by the Government and orders issued without change in Conditions, vide G.Os read at Sl.Nos.(4), (6) & (7).

Further, vide letters read at Sl.Nos (8) & (9) above, Dr. Y.K. Murthy, Chairman, Karnataka State DSRP, has suggested that, as a large number of dams are yet to be inspected, internal dam safety review teams should be constituted under the leadership of Chief Engineers with the assistance of a "Gates" Specialist and an experienced Geologist. It is also suggested that the report submitted by these review teams will be scrutinized by DSRP (under Chairmanship of Dr. Y.K. Murthy) which will subsequently examine and identify critical areas and make final recommendations to Government. The matter concerning constitution of Internal Dam Safety Review Teams is being examined separately. Also, Dr. Y.K. Murthy has suggested to merge the Gates Committee (constituted separately for the inspection of Dam Gates) alongwith the workload, with the DSRP.

Further, vide letters read at Sl.No. (10), the Director, K.E.R.S., K.R. Sagar has expressed dissatisfaction over the fixation of sitting fees of Rs. 300/- payable to members (issued vide G.O. read at Sl.No. (1) & (3)) and as decided in the NPDP meeting held at Bangalore on 19-10-04, a proposal is submitted to Government to increase the sitting fee payable to DSRP members on par with sitting fees being paid to members of DSRP in various states.

The above proposals and suggestions made by Dr. Y.K. Murthy are examined at Government level and hence the following orders.

**G.O.No: WRD 35 IM SAM KAY 2004 , BANGALORE, DATED: 23rd January 2007.**

I. The special committee constituted for inspection of gates of all large dams vide G.O. No. WRD 40 IM SAM KAY 2005, Bangalore Dt: 15-11-05 hereby stands dissolved.

The members of the special committee alongwith work load of "Gates" committee are hereby included in the DSRP constituted for safety review of all dams in the state which are more than 15 Mtrs. in height or which store more than 60 $MM^3$ of water, and the same is hereby reconstituted as follows:-

| Sl. No | Name | Field of expertise | |
|---|---|---|---|
| 1) | Dr. Y.K. Murthy,<br>Former Chairman,<br>Central Water Commission,<br>Champa D-44, Gulmohar Park,<br>New Delhi - 110 049 | Dam Construction Engineering and Management | Chairman |
| 2) | Sri. Kamble Y.S.<br>Chief Engineer (Retd.)<br>Sharanakutir, No.1760,<br>Karadi Bageecha, Bijapur - 586 101 | Water Resources Engineering | Member |
| 3) | Sri. M.B. Parappa Goudar,<br>Engineer-in-Chief (Retd.)<br>Basava Krupa, Shivagiri,<br>Jayanagar, Dharwad - 580 007 | Earthen Dam | Member |
| 4) | Sri. S.B. Koimattur,<br>Superintending Engineer (Retd),<br>Koimattur Layout, Behind Canara Bank,<br>Narayanapur, Dharwad - 580 006 | Dam Safety Surveillance, Masonry/Concrete Dam. | Member |

| Sl. No | Name | Field of expertise | |
|---|---|---|---|
| 5) | Sri. Y.Adinarayana Sastri<br>Managing Director (Retd.)<br>Tungabhadra Steel Products Ltd.,<br>Plot No.7, Sitaramnagar<br>Gunrock, Sikh village,<br>Secunderabad-500 009 | Gates & Hoists | Member |
| 6) | Sri. K.S. Krishnamurthy,<br>Former Director,<br>Geological Survey of India<br>No.928, 22nd Main, 4th 'T' Block,<br>Jayanagar, Bangalore-560 047. | Engineering Geology | Member |
| 7) | Sri. S. Balasubrahmanyam,<br>Director (Retd.), C.W.C.,<br>No.155, 3rd Phase, 6th Main,<br>J.P.Nagar, Bangalore-560 079 | Dam Design and Construction of Hydro-Electric Projects & Management | Member |
| 8) | Director.<br>K.E.R.S. K.R. Sagar - 571 607 | | Permanent Invitee |
| 9) | Superintending Engineer,<br>Monitoring & Evaluation,<br>Basava Bhavan, Basaveshwara Road,<br>Bangalore - 1. | | Convenor |

II. This Panel shall function with the following terms.

a) The Panel shall examine the safety review of dams which are more than 15 Mtrs. in height or which store more than 60 $MM^3$ of water, once every ten years as per para 4.3.1.6 of the "Report of dam safety procedures" published by Central Water Commission. The committee shall follow the terms of reference given in Annexure I. (The list of dams will be furnished separately).

b) The Central Executive Committee comprising of Secretary, Water Resources Department and Deputy Secretary, Water Resources Department shall approve the priority list of dams for inspection of the panel.

c) Whenever the panel visits the projects for inspection, the concerned Chief Engineer shall make all necessary arrangements for the members' travel.

d) Whenever the panel members travel from their Head quarters for inspection, the Traveling Allowance and Daily Allowance shall be regulated as per Government Order No. FD 2 SRA 2000, dated:3-2-2001. Apart from this, the members are also entitled for sitting fee at Rs. 7500/- (Rupees Seven thousand five hundred only) to the Chairman and Rs. 5000/- (Rupees five thousand only) to the Non official Members per visit for participating in meetings/inspections. The sitting fee is fixed, based on the concurrence given by the F.D. in their noting No. PWD/876/Finance Cell-1/2006 Dt: 16-10-06.

e) For the Chairman and Non-official Members, the Daily Allowance and Sitting fee shall be regulated considering the time of departure from their residence till their return at 24 hours period (duration less than Six hours shall not be considered).

f) The expenditure on travelling allowance, daily allowance and sitting fee of Chairman and Non-official Members shall be met out of the concerned project funds. The concerned Chief Engineer shall countersign the Traveling Allowance, Daily Allowance & Sitting fee bills of non-official members and arrange for payment.

g) The Chairman, Dam Safety Review Panel shall finalise the inspection reports and with the signature of all the members (including the signature of Chairman) shall forward the report to the Secretary, Water Resources Department, Director, Karnataka Engineering Research Station and the concerned Chief Engineer.

h) In case if any expert advice from external agency is required, the Central Executive Committee shall take suitable action as per the terms and conditions applicable to the members of this

panel. Payment for the special advice given by any agency shall be regulated as per the above terms. If this is not possible, the Central Executive Committee shall finalize the matter suitably.

i) Since the expert panel has to function under a fixed time frame, there may be occasions where a specific problem does not require the attention of all the members of panel or the problem related to a specific field requires detailed investigation. In such cases, the Central Executive Committee shall take suitable action.

The above order shall remain in force until further orders. All Government Orders issued previously in this regard stand superceded.

By Order & in the Name of the Governor of Karnataka,
**H. PARASHURAM**
Deputy Secretary (KBJN)
Water Resources Department.

**ANNEXURE-I TO GOVERNMENT ORDER NO. WRD 35 IM SAM KAY 2004 DATED: 23-01-2007**
**Terms of Reference for Dam Safety Review Panel.**

(for Existing Dams exceeding 15 m. in height or having storage volume of 60 $MM^3$ - vide CWC letter dt: 02.04.1990)

(The State) (The Projects) Responsibility for all matters relating to Dam safety during design, construction and operation rests with the owner, normally the State. A Dam Safety Review Panel (DSRP) provides independent experts' review and comments on safety matters to the owner, and to the Bank. The functioning of such a panel, which is advisory, in no way detracts from or substitutes for the expertise, resources or responsibilities of the owner. The panel's purview is strictly limited to safety matters, and does not extend to financial or economic issues, selection of alternative designs, construction phasing, or any other features of the facilities, except where safety is involved.

**General and Purpose:**

1. In situations where a dam has been designed, constructed or brought into operation without participation of a DSRP, or in situations where Bank-supported investments depend upon upstream facilities which have not been subjected to safety review, independent inspections are required. Accordingly, a DSRP shall be established for (the project) by (the State Government) to undertake periodic, comprehensive, independent reviews with the objective of evaluating features and actions pertaining to the safety of the dam, and providing recommendations to ( the State Government) of actions that may be needed to upgrade the dam and appurtenances to acceptable safety standards. The DSRP shall be guided by the dam safety assurance objectives of the Government of India, (the State Government), related legislation, regulations, standards and guidelines.
2. The DSRP shall contain a nucleus of members having expertise in the following disciplines:
   (a) Flood hydrology,
   (b) Engineering geology (dam foundations),
   (c) Dam design (concrete, rock fill, earth fill as appropriate),
   (d) Dam construction, engineering and management.
   There should be four to six members of the DSRP, but all four disciplines should be fully represented. Should the project involve hydropower generation as an integral part of the dam and outlet works, an expert on the design and construction of power plants and appurtenant waterways shall also be included as a member of the DSRP.
3. A Chairman shall be appointed amongst the members by (the State Government) to coordinate the communications of the DSRP, to call and chair its meetings, to ensure the membership's objectivity, and to provide balance to its reviews and recommendations. The person responsible for correspondence with the Chairman shall be nominated by (the State Government).
4. The flood hydrology member may be released at the discretion of the DSRP.
5. When, in the judgment of the DSRP, additional specific expertise is required, the Chairman will nominate qualified expert(s) for appointment to the panel to perform special assignments or evaluations on short notice, and report results directly to the panel. The assignments of such experts shall not exceed an aggregate time of ( ) man days per year; additional time may be allowed subject to direct approval by (the State Government) upon written request and justification by the DSRP.

**Meetings:**

6. The DSRP will meet as frequently as judged necessary by the Chairman to assess the status of (the project) and to present recommendations.
7. DSRP meetings will normally be held at the project site, and attended by all members. Individual inspections of the site, designs or construction work should occur only under special circumstances, and in such cases, the member will send his report of findings to the other panel members for issuance jointly after concurrence by all members.
8. An advance schedule of meetings will be drawn up by the DSRP and (the State Government) and sent to the CWC and the World Bank to allow them to send an observer to meetings, if they so desire. The Bank will not participate in any manner in the proceedings and discussions. The CWC will directly participate only to the extent that it serves as a consultant and, as so requested by (the State Government). The CWC, however may attend the sessions in the course of fulfilling its responsibilities for monitoring the country-wide Dam Safety programme.

**Specific Actions:**

9. The DSRP shall make a general review of the project records and history to become familiar with its operational requirements and their relationship to the facilities. With this background, the specific elements to be reviewed and evaluated by the DSRP shall include, but not be limited to the following:
   a) As built drawings and construction specifications;
   b) Design records, including geological reports, foundation, investigations, materials testing, materials strength parameters and stability analysis;
   c) Construction records and recent operation and maintenance records, including any instrumentation data;
   d) Criteria, methodology and determination of the design flood, flood routing studies, and the spillway sizing. Examine spillway operation records, and evaluate the adequacy of spillway sizing.
   e) Emergency plans including downstream flooding effects, emergency reservoir draw down, notification of impending dangers to downstream municipal authorities, major flood early warning system, major spilling operations plan, and site access during emergencies.
10. The DSRP will carryout a field inspection utilizing a standard check-list prepared in advance, and note the condition of the elements on the check list and categorize their status as satisfactory, poor, or unsatisfactory. Additional narrative will be provided for poor and unsatisfactory elements on the basis of these notes and the design needed to assure the safety of the dam, categorized in regard to urgency.
11. The DSRP may request additional field data including the need for drilling, sampling, laboratory tests, or installation of instruments.

**Support Services:**

12. (The State Government) shall make the operations and maintenance staff of the dam available to respond to the DSRP's questions at the time of the field inspection. As appropriate, the observations of the operations shall become part of the record of the DSRP's report. (The State Government's) designers and engineering consultants, if any, shall be present during selected DSRP meetings. The DSRP will be provided the necessary background information, any relevant data, notes or explanations regarding the designs, computations or methods used. (The State Government's) Chief Engineer (for the project) will coordinate the assembling of such information. The DSRP may suggest additional studies to assist in evaluation of the matters relating to the dam's Safety Status.
13. (The State Government) shall provide clerical, drafting and reproduction services or the preparation of DSRP reports. The GOI and (the State Government) shall take necessary actions to allow prompt travelling clearance as requested by DSRP members or experts called for the meeting.

**Reporting:**

14. The report of the meeting will be prepared and signed by all members and presented to (the State Government) prior to departure of the members. The report will include.
    a) areas of concern, request for additional analysis and recommendations, if any,
    b) information presented to the DSRP (by the State),
    c) issues raised by the state for consideration by the DSRP,
    d) actions taken in response to recommendations of the DSRP,

e) action pending in response to earlier recommendations of the DSRP.

15. A copy of the DSRP's report and supplementary information shall be transmitted by the State Government to the Central Water Commission and the World Bank.

**H. PARASHURAM**
Deputy Secretary (KBJN)
Water Resources Department.

P.R. 248

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಟಿ.ವಿ.ಅಶ್ವತ್ಥನಾರಾಯಣ, ಎಪಿಸಿ-97, ಡಿಎಆರ್ ಕೋಲಾರ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಉಲ್ಲೇಖ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ/2/95/ಓಬಿ ಸಂಖ್ಯೆ:255/98, ದಿನಾಂಕ:02-11-1998.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/73/2001-02, ಓಬಿ ಸಂಖ್ಯೆ: 14/2002-03, ದಿನಾಂಕ:20-04-2002.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03-12-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/151/2005, ದಿನಾಂಕ:10-07-2006.

**ಪ್ರಸ್ತಾವನೆ:**

ಶ್ರೀ ಟಿ.ವಿ.ಅಶ್ವತ್ಥನಾರಾಯಣ, ಎಪಿಸಿ-97, ಡಿಎಆರ್ ಕೋಲಾರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ದಿನಾಂಕ:29-03-1995ರಂದು ಪೊಲೀಸ್ ಜೀಪ್ ನಂಬರ್ ಸಿಎಜಿ 6170ಅನ್ನು ಶಿಡ್ಲಘಟ್ಟಪುರದ ಹರಿಜನ ಕಾಲೋನಿಯ ಮುಖ್ಯ ರಸ್ತೆಯಲ್ಲಿ ಅತಿ ಜೋರಾಗಿ ಮತ್ತು ಅಜಾಗರೂಕತೆಯಿಂದ ನಡೆಸಿ 5 ವರ್ಷದ ಹುಡುಗ ರಾಮು ಎಂಬುವನಿಗೆ ಡಿಕ್ಕೆ ಹೊಡೆಸಿ, ತಲೆ ಮತ್ತು ಮೈಮೇಲೆ ತೀವ್ರವಾಗಿ ಗಾಯಗಳುಂಟು ಮಾಡಿ, ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿ ಮತ್ತು ನಿರ್ಲಕ್ಷತೆ ಹಾಗೂ ದುರ್ನಡತೆಗಳನ್ನು ವ್ಯಕ್ತಪಡಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:02-11-1998ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ತಡೆಹಿಡಿಯುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯನ್ನು ವಿಳಂಬವಾಗಿ ಸಲ್ಲಿಸಿದ ಕಾರಣ, ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20-04-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿದೆ ನ್ಯಾಯಾಲಯದಲ್ಲಿ ಸಾಕ್ಷ್ಯಾಧಾರಗಳಿಲ್ಲದೆ ಆರೋಪಿಯನ್ನು ಖುಲಾಸೆಗೊಳಿಸಿದ್ದರೂ, ಅರ್ಜಿದಾರರು ಊರಿನ ಮಧ್ಯೆ ಅಜಾಗರೂಕತೆಯಿಂದ, ನಿರ್ಲಕ್ಷತನದಿಂದ, ವಾಹನ ಚಾಲನೆ ಮಾಡಿ, ಚಿಕ್ಕ ಬಾಲಕನಿಗೆ ಡಿಕ್ಕಿ ಹೊಡೆದು, ರಕ್ತಗಾಯಗಳಾಗಿ, ನಿಮ್ಹಾನ್ಸ್ ಆಸ್ಪತ್ರೆಗೆ ಕರೆದುಕೊಂಡು ಹೋಗಿರುವುದು ಸಾಬೀತಾಗಿರುತ್ತದೆ. ಚಿಕ್ಕಮಗು ಬಿದ್ದಿದ್ದರೂ, ತಾನು ವಾಹನದಿಂದ ಇಳಿದು, ಮಗುವನ್ನು ವೈದ್ಯರ ಬಳಿ ಕರೆದುಕೊಂಡು ಹೋಗದೇ, ಕನಿಷ್ಟ ಮಾನವೀಯತೆಯನ್ನು ತೋರದಿರುವುದು ಇವರ ನಿರ್ಲಕ್ಷತೆಗೆ ಕಾರಣವಾಗಿರುತ್ತದೆ. ಈಗ ಆ ಮಗು ಆರೋಗ್ಯವಾಗಿದ್ದರೂ, ಆ ಸಮಯದಲ್ಲಿ ಆ ಮಗು ಮತ್ತು ಅದರ ತಂದೆ ತಾಯಿಯವರಿಗೆ ಆತಂಕ, ಭಯ ಉಂಟು ಮಾಡಿರುವುದಂತೂ ನಿಜ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 366 ಪೊಸಿಅ 2006 ಬೆಂಗಳೂರು, ದಿನಾಂಕ:27ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ವಿ.ಅಶ್ವತ್ಥನಾರಾಯಣ, ಎಪಿಸಿ-97, ಡಿಎಆರ್, ಕೋಲಾರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:03-12-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 282

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎಸ್.ಹನುಮಂತಪ್ಪ ಮತ್ತು ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿಗಳು ಹಾಗೂ ಇತರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:-**

1 ನೋಟೀಸ್ ಸಂಖ್ಯೆ:ಸಿಆಸುಇ 7 ಎಸ್ಇಎನ್ 02 ದಿ:12.04.2002 ಮತ್ತು 03.05.2002.

2 ಶ್ರೀ ಎಸ್.ಹನುಮಂತಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿ:28.05.2003ರ ಉತ್ತರ.

3 ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿ:17.05.2002 ಮತ್ತು 11.08.2003ರ ಉತ್ತರ.

4 ಶ್ರೀ ದೊಡ್ಡಎರ್ರಣ್ಣ, ಅಧೀಕ್ಷಕರು ಅವರ ದಿ:24.06.2002ರ ಉತ್ತರ.

5 ಶ್ರೀ ಜಿ.ಕೃಷ್ಣಮೂರ್ತಿ, ಪ್ರಥಮ ದರ್ಜೆ ಸಹಾಯಕ ಅವರ ದಿ:19.06.2002ರ ಉತ್ತರ.

6 ಶ್ರೀ ಎ.ವಿಜಯಕುಮಾರ್, ಪ್ರಥಮ ದರ್ಜೆ ಸಹಾಯಕ ಅವರ ದಿ:18.06.2002ರ ಉತ್ತರ.

7 ಶ್ರೀ ಕೆ.ಹೆಚ್.ವಿಶ್ವಜೀವನ ಕುಮಾರ್, ಪ್ರಥಮ ದರ್ಜೆ ಸಹಾಯಕ ಅವರ ದಿ:05.06.2002ರ ಉತ್ತರ.

8 ಶ್ರೀ ಮಹಮದ್ ರಫೀಕ್, ದ್ವಿತೀಯ ದರ್ಜೆ ಸಹಾಯಕ ಅವರ ದಿ:28.06.2002ರ ಉತ್ತರ.

9 ಶ್ರೀಮತಿ ಎ.ಎನ್.ಶ್ರೀವಳ್ಳಿ, ಬೆರಳಚ್ಚುಗಾರ್ತಿ ಅವರ ದಿ:24.06.2002ರ ಉತ್ತರ.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲಾ ಪಂಚಾಯತ್‌ನಲ್ಲಿ ಶ್ರೀ ಹನುಮಂತಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಉಪ ಕಾರ್ಯದರ್ಶಿಯಾಗಿ, ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಸಹಾಯಕ ಕಾರ್ಯದರ್ಶಿಯಾಗಿ, ಶ್ರೀ ದೊಡ್ಡ ಎರ್ರಣ್ಣ ಅವರು ಅಧೀಕ್ಷಕರಾಗಿ, ಶ್ರೀ ಜಿ.ಕೃಷ್ಣಮೂರ್ತಿ, ಶ್ರೀ ಎ.ವಿಜಯಕುಮಾರ್ ಶ್ರೀ ಕೆ.ಹೆಚ್.ವಿಶ್ವಜೀವನ್ ಕುಮಾರ್ ಅವರುಗಳು ಪ್ರಥಮ ದರ್ಜೆ ಸಹಾಯಕರಾಗಿ, ಶ್ರೀ ಮಹಮದ್ ರಫೀಕ್ ಅವರು ದ್ವಿತೀಯ ದರ್ಜೆ ಸಹಾಯಕರಾಗಿ ಶ್ರೀಮತಿ ಎ.ಎನ್.ಶ್ರೀವಳ್ಳಿ ಅವರು ಬೆರಳಚ್ಚುಗಾರ್ತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ 01.07.1984ಕ್ಕಿಂತ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ದಿನಗೂಲಿ ನೌಕರರನ್ನು ಸೇವೆಯಲ್ಲಿ ಸಕ್ರಮಗೊಳಿಸಲು ದಿ:23.11.2000ರ ಸರ್ಕಾರದ ಖೋಟಾ ಆದೇಶವನ್ನು ಸೃಷ್ಟಿಸಿ ಜಾರಿಗೊಳಿಸಿರುವ ಮತ್ತು ಇದರಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವ ಆರೋಪಗಳಿಗಾಗಿ ಮೇಲ್ಕಂಡ ಅಧಿಕಾರಿ/ನೌಕರರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:12.04.02 ಮತ್ತು 03.05.02ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಆರೋಪಿತ ಅಧಿಕಾರಿ/ನೌಕರರುಗಳು ಉತ್ತರ ಸಲ್ಲಿಸಿ ತಮ್ಮಗಳ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರುಗಳ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಎಸ್ಇಎನ್ 2002, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ: 23.08.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ)

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮಂಡ್ಯ ಜಿಲ್ಲೆ ಪಾಂಡವಪುರ ಪಟ್ಟಣದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ/180/ಹೆಚ್‌ಎಎಸ್/2006, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2007**

ಮೇಲ್ಕಂಡ ಸಂದರ್ಭದಲ್ಲಿ ಮಂಡ್ಯ ಜಿಲ್ಲೆಯ ಪಾಂಡವಪುರ ಪಟ್ಟಣದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಲೋಕೇಶ್ ಬಿನ್ ಲೇಟ್ ಗವಿಸಿದ್ದೇಗೌಡ<br>ಬೀರಶೆಟ್ಟಿಹಳ್ಳಿ, ಪಾಂಡವಪುರ | ಸದಸ್ಯರು |
| 2 | ಶ್ರೀ ವಾಹಿದ್ ಬಿನ್ ಅಬ್ದುಲ್ ವಾಹಿದ್,<br>ಬಸವನಗುಡಿ ಬೀದಿ, ಪಾಂಡವಪುರ | ಸದಸ್ಯರು |
| 3 | ಶ್ರೀ ಆರ್. ಸತ್ಯನಾರಾಯಣ ಬಿನ್ ರಾಜಪ್ಪ,<br>ಉರ್ದು ಸ್ಕೂಲ್ ಹಿಂಭಾಗ, ಪಾಂಡವಪುರ | ಸದಸ್ಯರು |
| 4 | ಶ್ರೀಮತಿ ಲಕ್ಷ್ಮಮ್ಮ ಕೋಂ ಶಿವಯ್ಯ,<br>ಹರಿಜನ ಕಾಲೋನಿ, ಪಾಂಡವಪುರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 303

**ರಂಗಮ್ಮ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ವರ್ತೂರು ವಿಧಾನಸಭಾ ಕ್ಷೇತ್ರದ ಮಹಾದೇವಪುರ ನಗರಸಭೆಯ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ: 10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ವರ್ತೂರು ವಿಧಾನಸಭಾ ಕ್ಷೇತ್ರದ ಮಹದೇವಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ/165/ಹೆಚ್‌ಎಎಸ್/2006, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2007**

ಮೇಲ್ಕಂಡ ಸಂದರ್ಭದಲ್ಲಿ ವರ್ತೂರು ವಿಧಾನಸಭಾ ಕ್ಷೇತ್ರದ ಮಹದೇವಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಆರ್.ಎಂ.ಪಿ. ಧನಂಜಯನ್, ಬಿನ್ ಲೇಟ್ ಅಣ್ಣಾಮಲೈ,<br>ಪಟಂದೂರು, ಅಗ್ರಹಾರ ಗುಡ್ಡ ವೈಟ್ ಫೀಲ್ಡ್, ಬೆಂಗಳೂರು 560 066 | ಸದಸ್ಯರು |
| 2 | ಶ್ರೀ ಎಂ.ಜಿ. ರಾಮಕೃಷ್ಣ ರೆಡ್ಡಿ, ಬಿನ್ ಗೋವಿಂದಪ್ಪ,<br>ಮಹಾದೇವಪುರ, ವೈಟ್ ಫೀಲ್ಡ್ ರಸ್ತೆ, ಬೆಂಗಳೂರು - 560 048 | ಸದಸ್ಯರು |
| 3 | ಶ್ರೀ ನಾರಾಯಣಪ್ಪ, ಬಿನ್ ಮದ್ದೂರಪ್ಪ,<br>ದೊಡ್ಡನಕುಂದಿ ಬೆಂಗಳೂರು | ಸದಸ್ಯರು |
| 4 | ಶ್ರೀಮತಿ ಸಿಯಾನಾ ಕೆ.ಜಾಯ್ ಬಿನ್ ಲೋನಪ್ಪನ್ ನಂ-35,<br>ಇಂದಿರಾಗಾಂಧಿ ಬಡಾವಣೆ, 2ನೇ ಮುಖ್ಯರಸ್ತೆ, ಉದಯನಗರ,<br>ಬೆಂಗಳೂರು - 560 016. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 304

**ರಂಗಮ್ಮ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಮೂಲ ಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬಿಜಾಪುರ ವಿಮಾನ ನಿಲ್ದಾಣದ ಅಭಿವದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು ಬಿಜಾಪುರ ಇವರ ಪತ್ರ ಸಂ. D.No.RB/LND/R/127/00-01 ದಿ. 6.11.06 ಮತ್ತು 20.11.06.

**ಪ್ರಸ್ತಾವನೆ:**

ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಬಿಜಾಪುರ ಜಿಲ್ಲೆಯಲ್ಲಿ ವಿದೇಶಿ ಪ್ರವಾಸಿಗರ ಹಾಗೂ ಸಾರ್ವಜನಿಕರ ಅನುಕೂಲಕ್ಕಾಗಿ ವಿಮಾನ ನಿಲ್ದಾಣವನ್ನು ಸ್ಥಾಪಿಸಲು ಸರ್ಕಾರ ನಿರ್ಧರಿಸಿದ್ದು, ಈ ಸಂಬಂಧ ಬಿಜಾಪುರದ ಬಳಿ ಬುರಾನಪುರದಲ್ಲಿ ವಿಮಾನ ನಿಲ್ದಾಣ ಸ್ಥಾಪಿಸಲು ಸುಮಾರು 457.01 ಎಕರೆಗಳಷ್ಟು ಸರ್ಕಾರಿ ಭೂಮಿಯನ್ನು ಮತ್ತು 50 ಎಕರೆಗಳಷ್ಟು ಖಾಸಗಿ ಭೂಮಿಯನ್ನು ಗುರುತಿಸಲಾಗಿದೆ.

ಬಿಜಾಪುರ ಜಿಲ್ಲೆಯ ಜಿಲ್ಲಾಧಿಕಾರಿಗಳೂ, ಮೇಲೆ ಕ್ರಮ ಸಂ.1ರಲ್ಲಿ ಓದಲಾದ ಪತ್ರಗಳಲ್ಲಿ ಬಿಜಾಪುರ ನಗರಕ್ಕೆ ವಿಮಾನ ನಿಲ್ದಾಣ ನಿರ್ಮಾಣ ಮಾಡುವ ಸಲುವಾಗಿ 457.01 ಎಕರೆ ಸರ್ಕಾರಿ ಜಮೀನು ಹಾಗೂ 550 ಎಕರೆ ಖಾಸಗಿ ಜಮೀನಿನ ಅವಶ್ಯಕತೆ ಇದ್ದು, ಈ ಖಾಸಗಿ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳುವ ಸಲುವಾಗಿ ರೂ.5.50 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡುರಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 88 ರಾಅವಿ 2003, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2007**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಬಿಜಾಪುರ ವಿಮಾನ ನಿಲ್ದಾಣದ ನಿರ್ಮಾಣಕ್ಕಾಗಿ ಅವಶ್ಯವಿರುವ 1007.01 ಎಕರೆ ಜಮೀನಿನಲ್ಲಿ 457.01 ಎಕರೆ ಸರ್ಕಾರಿ ಜಮೀನನ್ನು ಹೊರತುಪಡಿಸಿ 550.00 ಎಕರೆ ಖಾಸಗಿ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳುವ ಸಲುರಾಗಿ 2006-07ನೇ ಸಾಲಿನ ಲೆಕ್ಕಶೀರ್ಷಿಕೆ 5465-01-190-1-05-211 ಬಂಡವಾಳಗಳು (ಯೋಜನೆ) ಇದರಡಿ ಉಳಿದಿರುವ ಮೊತ್ತದಲ್ಲಿ ರೂ.5.50 ಕೋಟಿಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

1) ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದಿಂದ Alignment ವಿವರಗಳು ಬಂದ ನಂತರವೇ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಗೊಳ್ಳಬೇಕು ಮತ್ತು

2) ಈ ಪ್ರಕ್ರಿಯೆಗಿಂತ ಮೊದಲು ಯಾವುದೇ ಕಾರಣಕ್ಕೂ ಹಣವನ್ನು ಖರ್ಚು ಮಾಡತಕ್ಕದಲ್ಲ.

ಈ ಮೊತ್ತವನ್ನು ಜಿಲ್ಲಾಧಿಕಾರಿಗಳು ಬಿಜಾಪುರ ಜಿಲ್ಲೆ ಇವರು ಪೇಯೀಸ್ ರಸೀತಿಯ (Payees Receipt) ಮುಖೇನ ಸರ್ಕಾರದ ಅಧೀನ ಕಾರ್ಯದರ್ಶಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜು ಪಡೆದು ಹಣ ತೆಗೆಯಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂ.ಆಇ 122 ವೆಚ್ಚ 1/2007 ದಿ.6.2.07 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

ಪಿ.ಆರ್. 305

## ಕಂದಾಯ ಸಚಿವಾಲಯ

**ವಿಷಯ:** ದಿ|| ಪಿ.ಎಂ. ನಾಡಗೌಡ ಹೌಸಿಂಗ್ ಸೊಸೈಟಿ ಖರೀದಿಸಿದ ಜಮೀನಿಗೆ ನೋಂದಣಿ ಮತ್ತು ಮುದ್ರಾಂಕ ಶುಲ್ಕ ವಿನಾಯಿತಿ ನೀಡುವ ಕುರಿತು.

**ಪ್ರಸ್ತಾವನೆ:**

ದಿ|| ಪಿ.ಎಂ. ನಾಡಗೌಡ ಹೌಸಿಂಗ್ ಸೊಸೈಟಿ, ಬಾಗಲಕೋಟೆ ಈ ಸಂಘವು ಗೃಹ ನಿರ್ಮಾಣದ ಸಲುವಾಗಿ ಸಂಘದ ವತಿಯಿಂದ ಬಾಗಲಕೋಟೆ ತಾಲ್ಲೂಕಿನ ಮುಚಖಂಡಿ ಗ್ರಾಮದಲ್ಲಿ ಒಟ್ಟು 29 ಎಕರೆ 32 ಗುಂಟೆ ಜಮೀನನ್ನು ಖರೀದಿಗೆ ತೆಗೆದುಕೊಂಡು ಕರಾರು ಪತ್ರಗಲನ್ನು ಸಹ ಮಾಡಿಕೊಂಡು ಜಮೀನು ಖರೀದಿಸಲು ಸಂಘದ ಪರವಾಗಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಇವರಿಂದ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಮೇರೆಗೆ ಪರವಾನಿಗೆಯನ್ನು ಪಡೆದುಕೊಂಡಿದೆ. ಈ ಗೃಹ ನಿರ್ಮಾಣ ಸಹಕಾರಿ ಸಂಘ ಖರೀದಿಸಲು ಉದ್ದೇಶಿಸಿರುವ ಖುಷ್ಕಿ ಜಮೀನಿಗೆ ಎಕರೆ ಒಂದಕ್ಕೆ ರೂ.80,000/- ಮೌಲ್ಯ ಇದ್ದು, ಒಟ್ಟು 29-32 ಗುಂಟೆಗೆ ರೂ.23,84,000/- ಮೌಲ್ಯವು ಆಗಿದ್ದು ಮತ್ತು ಈ ಮೌಲ್ಯಕ್ಕೆ ತಗಲುವ ಮುದ್ರಾಂಕ ಶುಲ್ಕ ರೂ.2,02,640/- ಮತ್ತು ನೋಂದಣಿ ಶುಲ್ಕ ರೂ.23,840/- ಒಟ್ಟು ರೂ.2,26,480/- ಗಳಲ್ಲಿ ವಿನಾಯಿತಿ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿತ್ತು.

2. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಸಾಮಾನ್ಯವಾಗಿ ಗೃಹ ನಿರ್ಮಾಣ ಸಹಕಾರಿ ಸಂಘಗಳು ವ್ಯಾಪಾರೋದ್ದೇಶಕ್ಕಾಗಿ ಮಾತ್ರ ಜಮೀನು ಖರೀದಿ ಮಾಡಿ ನಿವೇಶನಗಳನ್ನು ಮಾರುಕಟ್ಟೆ ಬೆಲೆಗೆ ಮಾರಾಟ ಮಾಡುವುದರಿಂದ ಬಹಳಷ್ಟು ಲಾಭ ಗಳಿಸುತ್ತವೆಯಾದರೂ ಸರ್ಕಾರದಿಂದ ನೀಡಲಾಗುವ ರಿಯಾಯಿತಿಯು ನಿವೇಶನಗಳನ್ನು ಖರೀದಿಸುವ ಸಾರ್ವಜನಿಕರಿಗೆ ಸೇರುವುದಿಲ್ಲ ಮತ್ತು ಒಂದು ವೇಳೆ ಒಂದು ಗೃಹ ನಿರ್ಮಾಣ ಸಹಕಾರಿ ಸಂಘಕ್ಕೆ ವಿನಾಯಿತಿ ನೀಡಿದಲ್ಲಿ, ರಾಜ್ಯದಲ್ಲಿರುವ ಇತರೆ ಎಲ್ಲಾ ಗೃಹ ನಿರ್ಮಾಣ ಸಹಕಾರಿ ಸಂಘಗಳೂ ವಿನಾಯಿತಿ ಕೋರುವ ಸಂಭವವಿದ್ದು, ಸರ್ಕಾರಕ್ಕೆ ಬಹಳಷ್ಟು ರಾಜಸ್ವ ನಷ್ಟವಾಗಲಿದೆ. ಈ ಕಾರಣದಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ.ಕಂಇ 194 ಮುನೋಮು 2006, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2006**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಇನ್ನು ಮುಂದೆ ಯಾವುದೇ ಗೃಹ ನಿರ್ಮಾಣ ಸಹಕಾರಿ ಸಂಘಗಳಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡದಿರಲು ನಿರ್ಧರಿಸಿ ಅದರಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಫ್. ಯರಗೊಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 306

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮ ಕುರಿತು - ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆನಾಸ 83 ಕಾಮಾಸೇ 2002, ದಿನಾಂಕ: 4.4.2003.
2. ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಲಿಖಿತ ಹೇಳಿಕೆ ದಿನಾಂಕ:17.6.2003.
3. ಸರ್ಕಾರಿ ಆದೇಶ ಸಂಖ್ಯೆ:ಆನಾಸ 83 ಕಾಮಾಸೇ 2002, ದಿನಾಂಕ:24.7.2003.

4. ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ಮತ್ತು ಸೆಕ್ಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರ ವಿಚಾರಣಾ ವರದಿ ದಿ:19.6.2004.
5. ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ರಕ್ಷಣಾ ಹೇಳಿಕೆ ದಿ:9.8.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬಳ್ಳಾರಿ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮ 1957ರ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11 ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಿದ್ದಪಡಿಸಿ ಜಾರಿಮಾಡಲಾಗಿತ್ತು.

ಅವರ ವಿರುದ್ಧ ಮಾಡಲಾದ ಆರೋಪಗಳು ಕೆಳಕಂಡಂತಿವೆ.

**ಆರೋಪ-1:**

ಶ್ರೀ ಕೆ.ಎನ್. ಸೀತಾರಾಮಪ್ಪ ಇವರು ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರಾಗಿ ಬಳ್ಳಾರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಮೇ 2000 ರಿಂದ ಜುಲೈ 2000ದ ಅವಧಿಗೆ ಕಾನೂನು ಬದ್ದ ಅಧಿಕಾರವಿಲ್ಲದೇ ಇದ್ದರೂ ಡಿಸ್ಪಿಲರಿ ಮತ್ತು ಸೀಮೆಎಣ್ಣೆ ಸ್ಟೋರೇಜ್ ಟ್ಯಾಂಕ್‌ಗಳ ಸತ್ಯಾಪನೆ ಮಾಡಿ ಅಪರಾಧವೆಸಗಿರುತ್ತಾರೆ.

**ಆರೋಪ-2:**

ಶ್ರೀ ಕೆ.ಎನ್. ಸೀತಾರಾಮಪ್ಪ ಇವರು ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರಾಗಿ ಬೆಂಗಳೂರು 2ನೇ ವೃತ್ತದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಮೆ:ಹರೀಶ್ ಸ್ಕೇಲ್ ಅಂಡ್ ಸರ್ವೀಸ್, ಬೆಂಗಳೂರು ಅವರು ಡೂಪ್ಲಿಕೇಟ್ ಸೀಲುಗಳನ್ನು ಉಪಯೋಗಿಸಿ ಪ್ರಮಾಣ ಬದ್ದ ತೂಕ ಮತ್ತು ಅಳತೆ (ಅಮಲುಜಾರಿ) ಅಧಿನಿಯಮ 1985ರ ಸೆಕ್ಷನ್ 37ರಡಿ ಅಪರಾಧವೆಸಗಿ, ಸರ್ಕಾರಕ್ಕೆ ಬರಬೇಕಾದ ಸತ್ಯಾಪನೆ ಶುಲ್ಕಕ್ಕೆ ಮೋಸ ಮಾಡುತ್ತಿದ್ದುದು ಅವರ ಗಮನಕ್ಕೆ ಬಂದರೂ ಸಹ ಪೊಲೀಸ್ ಠಾಣೆಯಲ್ಲಿ ದೂರನ್ನು ದಾಖಲಿಸುವಂತೆ ಕಾನೂನು ಮಾಪನಸಾಸ್ತ್ರ ನಿಯಂತ್ರಕರು ಮತ್ತು ಬೆಂಗಳೂರು ಜಿಲ್ಲಾ ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು ಸ್ಪಷ್ಟ ಲಿಖಿತ ಆದೇಶ ನೀಡಿದಾಗ್ಯೂ ಸಹ ಮೆ:ಹರೀ ಸ್ಕೇಲ್ಸ್ ಅಂಡ್ ಸರ್ವೀಸಸ್ ಅವರ ವಿರುದ್ಧ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಕಂಪ್ಲೆಂಟ್ ದಾಖಲಿಸದೇ ದುರುದ್ದೇಶಪೂರ್ವಕವಾಗಿ ಹಿರಿಯ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧ ಮಾಡಲಾದ 2 ಆರೋಪಗಳನ್ನು ನಿರಾಕರಿಸಿರುತ್ತಾರೆ. ಈ ಆರೋಪಗಳಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು, ಈ ಬಗ್ಗೆ ಸರ್ಕಾರಕ್ಕೆ ಬರಬೇಕಾದ ಸತ್ಯಾಪನೆ ಶುಲ್ಕವನ್ನು ನಿಗದಿತ ಅವಧಿಯೊಳಗೆ ಜಮಾ ಮಾಡಿರುರುದರಿಂದ, ಸರ್ಕಾರಕ್ಕೆ ಆರ್ಥಿಕ ಲಾಭ ಉಂಟಾಗಿದೆ ಎಂದು ತಿಳಿಸಿರುತ್ತಾರೆ. 2ನೇ ಆರೋಪಕ್ಕೆ ಸಂಬಂಧಿಸಿದಂತೆ, ಮೆ:ಹರೀಶ್ ಸ್ಕೇಲ್ಸ್ ಅಂಡ್ ಸರ್ವಿಸ್ ಅವರ ವಿರುದ್ಧ ತೂಕ ಮತ್ತು ಅಳತೆ ಅಮಲು ಜಾರಿ ಅಧಿನಿಯಮ 1985ರ 37ನೇ ಪ್ರಕರಣದಡಿಯಲ್ಲಿ ಕ್ರಿಮಿನಲ್ ಕಂಪ್ಲೆಂಟ್ ದಾಖಲಿಸದೆ ದುರುದ್ದೇಶಪೂರ್ವಕವಾಗಿ ಹಿರಿಯ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿರುವುದಾಗಿ ಆಪಾದಿಸಲಾಗಿದ್ದು, ಈ ಬಗ್ಗೆ ತೆಗೆದುಕೊಂಡಿರುವ ಕ್ರಮಗಳನ್ನು ಕಾಲಾನುಕ್ರಮದಲ್ಲಿ ವಿವರಿಸಲಾಗಿದೆ ಎಂದೂ, ದೂರು ದಾಖಲಿಸಲು ಸಂಬಂಧಪಟ್ಟ ನಿರೀಕ್ಷಕರಿಗೆ ಸೂಕ್ತ ನಿರ್ದೇಶನ ನೀಡುವಂತೆ ಕೋರಲಾಗಿತ್ತು, ಆ ಪತ್ರವನ್ನು ಪರಿಗಣಿಸಿದಲ್ಲಿ ಅವರು ತೆಗೆದುಕೊಂಡಿರುವ ಕ್ರಮಗಳು ಸರಿಯಾಗಿವೆ ಎಂದು ತಿಳಿಸಿ ಈ ಆರೋಪಗಳಿಂದ ಮುಕ್ತಗೊಳಿಸಲು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಕೆ. ಈಶ್ವರ್‌ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ವಿಚಾರಣಾಧಿಕಾರಿಗಳ ವರದಿಯಲ್ಲಿ ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ವಿರುದ್ಧ ಮಾಡಲಾದ 2 ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ದಿ:19.6.2006ರಂದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಮೊದಲನೇ ಆರೋಪವು ಸಾಭೀತಾಗಿರುವುದಾಗಿ, 2ನೇ ಆರೋಪವು ಸಾಭೀತಾಗಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು ಇವರು ಮೇಲೆ (5)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸ್‌ಗೆ ಉತ್ತರ ಸಲ್ಲಿಸಿ ವಿಚಾರಣಾಧಿಕಾರಿಗಳ ವರದಿಯಂತೆ ಅವರ ಮೇಲಿನ ಒಂದನೇ ಆರೋಪ ರುಜುವಾತಾಗಿರುವುದರಿಂದ ಹಾಗೂ 2ನೇ ಆರೋಪ ರುಜುವಾತಾಗದೇ ಇರುವುದರಿಂದ, ಒಂದನೇ ಆರೋಪದಲ್ಲಿರುವ ವಿಷಯಗಳನ್ನು ದುರ್ನಡನೆ ಎಂದು ಪರಿಗಣಿಸಬಾರದಾಗಿ ವಿನಂತಿಸುತ್ತಾ, ಎರಡೂ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳು ಆರೋಪಿತ ಅಧಿಕಾರಿಯು ನೀಡಿರುವ ಹೇಳಿಕೆ ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 83 ಕಾಮಾಸೇ 2002, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2007**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅದಿಕಾರಗಳನ್ನು ಚಲಾಯಿಸಿ ಶ್ರೀ ಕೆ.ಎನ್. ಸೀತಾರಾಮಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನ ಶಾಸ್ತ್ರ ಇಲಾಖೆ ಇವರು ತಮಗೆ ಇಲ್ಲದ ಅಧಿಕಾರವನ್ನು ಚಲಾಯಿಸಿರುವ ಆರೋಪ ಸಾಬೀತಾಗಿರುವುದರಿಂದ ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ (without cumulative effect) ತಡೆಹಿಡಿಯುವ ದಂಡನೆ ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 307

## FINANCE SECRETARIAT

**Sub :** Delegation of Special Powers to the Heads of Departments in respect of purchase of small computers and peripherals reg.

**Read :** 1) Government Order No. FD 3 TFP 89 dated 11.5.1990.
2) Government Order No. FD 3 TFP 2001 dated 12.7.2001.
3) Government Order No. FD 17 TFP 2004 dated 2.2.2005.
4) Proceedings of the State level Technical Advisory Panel (TAP) meeting held on 9.1.2006.

**Preamble:**

In Government Order read at (1) above certain special powers have been delegate to all Heads of departments in respect of maintenance of Computers installed by them in their offices. The powers in respect of Sl.No.2 and Sl.No.3 of the said order ha been enhanced vide Government Order read at (2) above. The powers delegated in Sl.No. 3 has been further enhanced in Government Order read at (3) above.

The State Level Technical advisory Panel in its meeting held on 9th January 2006 has approved the Delegation of powers to the heads of Departments for purchase of small number of computers and related items subject to the conditions that the purchases made hould be got ratified from the departmental TAP with in three months and hence this order.

**Government Order No. FD 6 TFP 2006, Bangalore, Dated: 20th January 2007**

Government are pleased to delegate following further special powers to all Heads of Departments in respect of purchase of small number of computers and related items subject to the condition that the purchases made should be got ratified from the Department Techncal Advisory Panel (TAP) within three months.

| Sl. No. | Description of Powers (Items) | Delegation of power to accord sanction | Financial restriction |
|---|---|---|---|
| 1. | Procuring some extra Desktop compters/printers/flatbed scanners for existing -governance projects or new projects | Maximum of five desktop computers and/or maximum five DMP/Laser/Inkjet Printers/ Flatbed Scanners | Maximum of Rs.4.00 lakhs per annum for all items from Sl.No.1 to Sl.N.10. |
| 2. | Upgrading the existing desktop computers by goings in for the new desktop computers to replace the old desktop computers. | Maximum of five desktop computers and or maximum five DMP/Laser/Inkjet Printers/Flatbed Scanners. | |
| 3. | Upgrading the desktop computers by upgrading the RAM and/or the hard disk of existing desk top computers | Full | |
| 4. | Procuring of more licenses of existing softwares and upgradation of the software | Full | |
| 5. | Purchase of new UPS (Up to 1 KVA only) | Maximum five numbers) | |
| 6. | Upgrading existing UPS (Up to 1 KVA only) | Full | |
| 7. | Purchase of batteries for UPS | Full | |
| 8. | For preparation of systems Requirement Specification report | Full | |
| 9. | Additional/upgrading Hub/Switch (up to 24 ports) | Maximum five numbers | |
| 10. | AMC for computers, peripherals LAN, UPS | Full | |

The above delegation of powers may be exercised by the Heads of Departments subject to the condition that no such sanction should be given in the absence of sufficient budget provision.

By Order and in the name of the Governor of Karnataka,

**C. SHAMA RAO**
Under Secretary to Government,
(FR, BC&C) Finance Department.

P.R. 318

## ಒಳಾಡಳಿತ ಸಚಿವಾಲಯ

**ವಿಷಯ :** ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯೆಂದು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರ ಆದೇಶ ಸಂಖ್ಯೆ: ಹೆಚ್‌ಡಿ 74 ಪಿಆರ್‌ಇ 2005 ದಿನಾಂಕ: 26.9.2005.
2) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 113 ಎಸ್‌ಪಿಎಸ್ 2006, ದಿನಾಂಕ: 20.6.2006.
3) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರುರವರ ಪತ್ರ ಸಂಖ್ಯೆ:ಕಸಿ/ನಗದು/ಸಿಆರ್-25/2006, ದಿನಾಂಕ: 3.7.2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರ ಆದೇಶ ದಿನಾಂಕ: 26.9.2005 ರಲ್ಲಿ ಶ್ರೀ ಧರ್ಮಪಾಲ ನೇಗಿ ಐ.ಪಿ.ಎಸ್., ರವರು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರವರ ಹುದ್ದೆಯಲ್ಲಿ ಕರ್ತವ್ಯ / ಪ್ರಭಾರ ವಹಿಸಿಕೊಂಡ ದಿನಾಂಕ:12.9.2005 ರಿಂದ ಒಂದು ವರ್ಷದವರೆಗೆ ಅಥವಾ ಶ್ರೀಯುತರು ಸದರಿ ಹುದ್ದೆಯಲ್ಲಿ ಮುಂದುವರಿದ ದಿನಾಂಕದವರೆಗೆ ಇವೆರಡರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ವೇತನ ಶ್ರೇಣಿ ರೂ. 22400-525-24000ರಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯಲ್ಲಿ ಮುಂದುವರಿಯುವಂತೆ ಆದೇಶಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರವರು, ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 113 ಎಸ್‌ಪಿಎಸ್ 2006, ದಿನಾಂಕ: 20.6.2006ರ ಆದೇಶದಲ್ಲಿ ಶ್ರೀ ಎಸ್.ಟಿ. ರಮೇಶ, ಐ.ಪಿ.ಎಸ್., ಇವರನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರವರ ಹುದ್ದೆಗೆ ವರ್ಗಾಯಿಸಿ ನೇಮಕ ಮಾಡಿ ಆದೇಶಿಸಿದ್ದು ಸದರಿ ಆದೇಶದನ್ವಯ ಶ್ರೀ ಎಸ್.ಟಿ. ರಮೇಶ, ಐ.ಪಿ.ಎಸ್., ಇವರು ದಿನಾಂಕ: 1.7.2006 ರಂದು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು ಕರ್ತವ್ಯವನ್ನು ನಿರ್ವಹಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಶ್ರೀ ಎಸ್.ಟಿ. ರಮೇಶ, ಐ.ಪಿ.ಎಸ್., ಇವರು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು ಇವರು ಪ್ರಭಾರ ವಹಿಸಿಕೊಂಡ ದಿನಾಂಕ: 1.7.2006 ರಿಂದ ಒಂದು ವರ್ಷದವರೆಗೆ ಅಥವಾ ಶ್ರೀಯುತರು ಸದರಿ ಹುದ್ದೆಯಲ್ಲಿರುವವರೆಗೆ ವೇತನ ಶ್ರೇಣಿ ರೂ. 22400-525-24000 ರಲ್ಲಿ ಕಾರಾಗೃಹದಲ್ಲಿ ಮಹಾ ನಿರೀಕ್ಷಕರ ಹುದ್ದೆಯನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯೆಂದು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಅದರಂತೆ ಈ ಕೆಳಕಂಡಂತೆ ಸರ್ಕಾರದ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 61 ಪಿಆರ್‌ಇ 2006, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2007**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಗೆ ಶ್ರೀ ಎಸ್.ಟಿ. ರಮೇಶ, ಐ.ಪಿ.ಎಸ್., ಇವರನ್ನು ಆದೇಶದ ಕ್ರಮಾಂಕ ಡಿಪಿಎಆರ್ 113 ಎಸ್‌ಪಿಎಸ್ 2006, ದಿನಾಂಕ: 20.6.006 ರಲ್ಲಿ ವರ್ಗಾಯಿಸಿ ನೇಮಕ ಮಾಡಿರುವುದರಿಂದ ಇವರು ಪ್ರಭಾರ ವಹಿಸಿಕೊಂಡ ದಿನಾಂಕ: 1.7.2006 ರಿಂದ ಸದರಿ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ವೇತನ ಶ್ರೇಣಿ ರೂ. 22400-525-24000ರಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯೆಂದು, ಒಂದು ವರ್ಷದವರೆಗೆ ಅಥವಾ ಈ ಬಗ್ಗೆ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಮುಂದುವರಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1058 ವೆಚ್ಚ-6 2006, ದಿನಾಂಕ: 30.11.2006 ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)ಯ ಟಿಪ್ಪಣಿ ಸಂಖ್ಯೆ:ಸಿಆಸುಇ 143 ಸೆಪೋಸೇ 2006, ದಿನಾಂಕ:31.1.2007 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್. 319

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಸೆರೆಮನೆ ಮತ್ತು ಸಿನಿಮಾ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ಚಾರಿತ್ರಿಕ ಖಾಸಗಿ ದಾಖಲೆಗಳನ್ನು ಗಣಕೀಕರಣ ಮಾಡಿದ ಸಂಸ್ಥೆಗೆ ಹಣ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 20 ಎಡಿಎಂ 2003(ಭಾ) ದಿನಾಂಕ: 24.8.2006 ಮತ್ತು 27.12.2006.

**ಪ್ರಸ್ತಾವನೆ:**

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:24.8.2006ರ ಪತ್ರದಲ್ಲಿ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ಧಾರವಾಡ ಮತ್ತು ಮೈಸೂರು ವಿಭಾಗೀಯ ಕಛೇರಿಗಳಲ್ಲಿ ಖಾಸಗಿ ಐತಿಹಾಸಿಕ ಮಹತ್ವವುಳ್ಳ ಕಾಗದ ಪತ್ರಗಳು, ದಾಖಲೆ, ಇವುಗಳು ರಾಜ್ಯದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುವುದರಿಂದ ಇವುಗಳನ್ನು ಗಣಕೀಕರಣ ಮಾಡುವ ಸಲುವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ವಯ ಟೆಂಡರುಗಳನ್ನು ಆಹ್ವಾನಿಸಿ ಅದರಲ್ಲಿ ಅರ್ಹವಾದ ಮೆಸಸ್ ಪ್ರೊಫೇಷನಲ್ ಸಾಫ್ಟ್‌ವೇರ್ ಕನ್ಸಲ್‌ಟೆಂಟ್ಸ್, ಬೆಂಗಳೂರು ಇವರಿಗೆ 2003-04ರಲ್ಲಿ ಗಣಕೀಕರಣ ಕಾರ್ಯವನ್ನು ವಹಿಸಲಾಗಿತ್ತೆಂದು, ಸದರಿ ಸಂಸ್ಥೆಯು ಒಟ್ಟು 134903 ದಾಖಲೆಗಳನ್ನು ಗಣಕೀಕರಣಗೊಳಿಸಿರುವುದಾಗಿ ತಿಳಿಸಿದ್ದಾರೆ.

ಸದರೀ ಸಂಸ್ಥೆಯು ತನಗೆ ವಹಿಸಿದ ಗಣಕೀಕರಣದ ಕಾರ್ಯವನ್ನು ನಿಯಮಗಳ ಪ್ರಕಾರ ತೃಪ್ತಿಕರವಾಗಿ ನಿರ್ವಹಿಸದೆ ಎಂದು ನಿರ್ದೇಶಕರು ದೃಢೀಕರಿಸಿ ಈ ಬಗ್ಗೆ ಕ್ಯಾಟಲಾಗ್‌ಗಳು ಮತ್ತು ಹಾರ್ಡ್‌ಡಿಸ್ಕ್‌ಗಳನ್ನು 4 ವಾಲ್ಯೂಮ್‌ಗಳಲ್ಲಿ ನಿರ್ದೇಶನಾಲಯಕ್ಕೆ ಸಲ್ಲಿಸಿರುವುದಾಗಿ ತಿಳಿಸಿದ್ದಾರೆ. ಕಾರಣಾಂತರದಿಂದಾಗಿ ಸದರಿ ಸಾಲಿನಲ್ಲಿ ಹಣವನ್ನು ಪಾವತಿಸಲಿಲ್ಲವೆಂದೂ, ಆದ್ದರಿಂದ ಪ್ರಸ್ತುತ ಸಾಲಿನ ಕ್ರಿಯಾ ಯೋಜನೆಯಲ್ಲಿ ಗಣಕೀಕರಣಕ್ಕಾಗಿ ನಿಗದಿಪಡಿಸಿದ ಹಣದಲ್ಲಿ ಸದರಿ ಸಂಸ್ಥೆಗೆ 11,09,540/- ರೂಪಾಯಿಗಳನ್ನು ಪಾವತಿ ಮಾಡಲು ಶಿಫಾರಸ್ಸು ಮಾಡಿದ್ದಾರೆ. ನಿರ್ದೇಶಕರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 20 ರಾಪಸ 2006, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2007**

ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶಕರು ದೃಢೀಕರಿಸಿ ಶಿಫಾರಸ್ಸು ಮಾಡಿದನ್ವಯ ನಿರ್ದೇಶನಾಲಯದ ವತಿಯಿಂದ ಚಾರಿತ್ರಿಕ ಮಹತ್ವದ ದಾಖಲೆಗಳನ್ನು ಗಣಕೀಕರಣ ಗೊಳಿಸಿದ್ದಕ್ಕಾಗಿ ಮೆಸರ್ಸ್ ಪ್ರೊಫೇಷನಲ್ ಸಾಫ್ಟ್‌ವೇರ್ ಕನ್ಸಲ್‌ಟೆಂಟ್, ಬೆಂಗಳೂರು ಈ ಸಂಸ್ಥೆಗೆ 11,09,540/- ರೂಪಾಯಿಗಳನ್ನು (ರೂಪಾಯಿ ಹನ್ನೊಂದು ಲಕ್ಷದ ಒಂಭತ್ತು ಸಾವಿರದ ಐದು ನೂರ ನಲ್ವತ್ತು ಮಾತ್ರ) ಈ ಮೂಲಕ ಪಾವತಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-104-01-051-ಸಾಮಾನ್ಯ ವೆಚ್ಚಗಳು (ಯೋಜನೇತರ) ಇದರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಜ್**

ಪಿ.ಆರ್. 320

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಗ್ರಂಥಾಲಯಕ್ಕೆ ಪೀಠೋಪಕರಣ ಮತ್ತು ಲೇಖನ ಸಾಮಾಗ್ರಿಗಳನ್ನು ಖರೀದಿಸಲು ರೂ.1.50 ಲಕ್ಷಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ಕೀಮರ 2006 ದಿನಾಂಕ:7.4.2006.

2. ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ:ಕಸನಿ:ಗ್ರಮಾಸ:1/2/2006-07 ದಿನಾಂಕ:26.9.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 7.4.2006ರ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2006-07ನೇ ಸಾಲಿನ ಕ್ರಿಯಾ ಯೋಜನೆಯಡಿಯಲ್ಲಿ ನಿರ್ದೇನಾಲಯದ ಗ್ರಂಥಾಲಯ ಅಭಿವೃದ್ಧಿಗಾಗಿ ಅನುಮೋದನೆ ನೀಡಿರುತ್ತದೆ. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:26.9.2006ರ ಪತ್ರದಲ್ಲಿ ನಿರ್ದೇಶನಾಲಯದ ಗ್ರಂಥಾಲಯ ಅಭಿವೃದ್ಧಿಗಾಗಿ ರೂ.1.50 ಲಕ್ಷಗಳನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 112 ಕಸನಿ 2006, ಬೆಂಗಳೂರು ದಿನಾಂಕ: 9ನೇ ಫೆಬ್ರವರಿ 2007**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ 2006-07ನೇ ಸಾಲಿನಲ್ಲಿ ನಿರ್ದೇಶನಾಲಯದ ಗ್ರಂಥಾಲಯದ ಅಭಿವೃದ್ಧಿಗಾಗಿ ಅನುಮೋದನೆ ನೀಡಿರುವ ರೂ. 1.50 ಲಕ್ಷದಲ್ಲಿ ಗ್ರಂಥಾಲಯಕ್ಕೆ ಪೀಠೋಪಕರಣಗಳು ಹಾಗೂ ಲೇಖನ ಸಾಮಗ್ರಿಗಳನ್ನು ಖರೀದಿಸಲು ಮೇಲೆ (1)ರ ಸರ್ಕಾರಿ ಆದೇಶದಲ್ಲಿ ಒದಗಿಸಿರುವ ಒಟ್ಟಾರೆ ಅನುದಾನ ಯಾವುದೇ ಕಾರಣಕ್ಕೂ ಮೀರಬಾರದೆಂಬ ಷರತ್ತಿಗೊಳಪಟ್ಟು ರೂ.1.50 ಲಕ್ಷ (ರೂ. ಒಂದೂವರೆ ಲಕ್ಷಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧದ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕಶೀರ್ಷಿಕೆ 2205--00-102-4-01-015 (ಯೋಜನೆ) ರಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: 1028 ಐಎಫ್(ಬಿಎ) 2006 ದಿನಾಂಕ: 6.11.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಜ್**

ಪಿ.ಆರ್. 321

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮಂಗಳೂರು ನಗರಕ್ಕೆ ಕುಡಿಯುವ ನೀರು ಸರಬರಾಜಿಗಾಗಿ ತುಂಬೆಯ ಬಳಿ ಹೊಸ ಕಿಂಡಿ ಅಣೆಕಟ್ಟು ನಿರ್ಮಾಣ ಯೋಜನೆಯನ್ನು ರೂ.40.00 ಕೋಟಿ ಅಂದಾಜು ವೆಚ್ಚದಲ್ಲಿ ನಿರ್ಮಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ದಿನಾಂಕ:24.3.2006, ಸಂಖ್ಯೆ:ಮನಪಾ/ಆಯುಕ್ತರು/ನೀ.ಸ.ಹೊ.ಕಿ.ಅ 05-06/ಎಫ್ 22 ದಿನಾಂಕ:5.8.2006 ಮತ್ತು ಸಂಖ್ಯೆ:ಮನಪಾ/ಆಯುಕ್ತರು/ನೀ.ಸ.ಹೊ.ಕಿ.ಅ 06-07/ಎಫ್ 22 3.11.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಮಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು, 2001ರ ಜನಗಣತಿಯ ಪ್ರಕಾರ ಮಂಗಳೂರು ನಗರದ ಜನಸಂಖ್ಯೆ 4.25 ಲಕ್ಷಗಳಾಗಿತ್ತೆಂದು, ಅದು ಪ್ರಸ್ತುತ 4.73 ಲಕ್ಷಗಳಿಗೆ, ಹೆಚ್ಚಿದೆಯೆಂದು ತಿಳಿಸುತ್ತಾ, ಮಂಗಳೂರು ನಗರಕ್ಕೆ ಕುಡಿಯುವ ನೀರಿನ ಮೂಲಕ ನೇತ್ರಾವತಿ ನದಿಯಾಗಿದ್ದು ತುಂಬೆ ಗ್ರಾಮದ ಬಳಿ ನದಿಗೆ ಅಡ್ಡಲಾಗಿ ಒಂದು ಕಿಂಡಿ ಅಣೆಕಟ್ಟನ್ನು ನಿರ್ಮಿಸಿ ಮಂಗಳೂರು ನಗರಕ್ಕೆ ಕುಡಿಯುವ

ನೀರನ್ನು ಸರಬರಾಜು ಮಾಡಲಾಗುತ್ತಿದೆ. ಈ ಕಿಂಡಿ ಅಣೆಕಟ್ಟೆಯ ಸಂಗ್ರಹಣಾ ಶಕ್ತಿಯು 4.891 MCM ಆಗಿದ್ದು ಮಂಗಳೂರು ನಗರದ ಕುಡಿಯುವ ನೀರಿನ ಅಗತ್ಯವನ್ನು ಪೂರೈಸಲು ಸಾಕಾಗುತ್ತಿಲ್ಲ ಮತ್ತು ಪ್ರಸ್ತುತ ಕುಡಿಯುವ ನೀರಿನ ಸರಬರಾಜು ಮಟ್ಟವು 82 LPCD ಕುಡಿಯುವ ನೀರು ಪೂರೈಕೆಯಾಗಿದ್ದು, ಈಗಿನ ಕುಡಿಯುವ ನೀರಿನ ಅಗತ್ಯವನ್ನು ಪೂರೈಸಲು ಇದು ಸಾಕಾಗುತ್ತಿಲ್ಲವೆಂದು ವರದಿ ಮಾಡಲಾಗಿದೆ. ಮಂಗಳೂರು ಮಹಾನಗರ ಪಾಲಿಕೆಯು ಹೆಚ್ಚಿನ ನೀರಿನ ಅಗತ್ಯವನ್ನು ಪೂರೈಸಲು ತುಂಬೆಯ ಬಳಿ ಹೊಸ ಕಿಂಡಿ ಅಣೆಕಟ್ಟನ್ನು ನಿರ್ಮಿಸಿ ನೀರು ಸಂಗ್ರಹಿಸಲು ಮತ್ತು ಕುಡಿಯುವ ನೀರಿನ ಪೂರೈಕೆಯ ಸಾಮರ್ಥ್ಯವನ್ನು 162 LPCDಗೆ ಹೆಚ್ಚಿಸಲು ಹೊಸ ಯೋಜನೆಯನ್ನು ಮಂಜೂರು ಮಾಡಲು ಮಂಗಳೂರು ಮಹಾನಗರ ಪಾಲಿಕೆಯು ಪ್ರಸ್ತಾಪಿಸಿದ ಮತ್ತು ಹಾಲಿ ಇರುವ ಕಿಂಡಿ ಅಣೆಕಟ್ಟೆಯಿಂದ 50-100 ಮೀಟರ್ ಕೆಳ ಹರಿವಿನಲ್ಲಿ ಹೊಸ ಕಿಂಡಿ ಅಣೆಕಟ್ಟನ್ನು ನಿರ್ಮಿಸಿ 120 ದಿನಗಳಿಗೆ ಅಗತ್ಯವಾಗುವಷ್ಟು ನೀರನ್ನು ಸಂಗ್ರಹಿಸಲು ಮತ್ತು 2026ನೇ ವರ್ಷಕ್ಕೆ ಮಂಗಳೂರು ಮತ್ತು ಸುತ್ತಮುತ್ತಲಿನ ನಗರಗಳಲ್ಲಿ ಇರಬಹುದಾದ 6.76 ಲಕ್ಷ ಜನಸಂಖ್ಯೆಯನ್ನು ಗುರಿಯಾಗಿಟ್ಟುಕೊಂಡು ಮಂಗಳೂರು ನಗರ ಮತ್ತು ಸುತ್ತಲಿನ ಪಟ್ಟಣಗಳಿಗೆ ಕುಡಿಯುವ ನಿರನ್ನು ಪೂರೈಸಲು ಹೊಸ ಕಿಂಡಿ ಅಣೆಕಟ್ಟನ್ನು ನಿರ್ಮಿಸಲು ಮತ್ತು ಹಾಲಿ ಇರುವ ಅಣೆಕಟ್ಟೆಗಿಂತ 3 ಮೀಟರ್ ಎತ್ತರಕ್ಕೆ ಹೆಚ್ಚಿಸಲು ಮತ್ತು ಸಂಗ್ರಹಣೆಯನ್ನು ಅಂದಾಜು 14.47 MCM ರಷ್ಟು ನೀನ್ನು ಸಂಗ್ರಹಿಸುವ ಸಾಮರ್ಥ್ಯದಲ್ಲಿ ವಿನ್ಯಾಸಗೊಳಿಸಲಾಗಿದೆ.

ಪ್ರಸ್ತುತ ಮಂಗಳೂರು ನಗರವು ತುಂಬೆ ಬಳಿಯ ನೇತ್ರಾವತಿ ನದಿಯಿಂದ 82 MLD ನೀರನ್ನು ಪಡೆಯುತ್ತಿದೆ. ಎ.ಡಿ.ಬಿ. ಆರ್ಥಿಕ ಸಹಾಯದ KUDCEMP ಯೋಜನೆಯಡಿ ಹೆಚ್ಚುವರಿಯಾಗಿ 80 MLD ನೀರನ್ನು 2026ಕ್ಕೆ ಅಗತ್ಯ ಬೇಡಿಕೆಯಾದ 160 MLD ನೀರನ್ನು ಸರಬರಾಜು ಮಾಡಲು ಉದ್ದೇಶಿಸಲಾಗಿದೆ. ಇದರಲ್ಲಿ ಮಂಗಳೂರು ನಗರವಲ್ಲದೇ ಉಳ್ಳಾಲ ಮತ್ತು ತುಂಬೆಯಿಂದ ಮಂಗಳೂರು ಮಾರ್ಗ ಮಧ್ಯದಲ್ಲಿ ಬರುವ ಹಳ್ಳಿಗಳಿಗೂ ನೀರು ಸರಬರಾಜು ಮಾಡುವುದು ಸಹ ಸೇರಿದೆ. ಆದರೆ ಎ.ಡಿ.ಬಿ.ರವರು ಒಪ್ಪದಿರುವುದರಿಂದ ಹಾಗೂ ಕಂಡ್ಸಂಪ್ ಯೋಜನೆಯಲ್ಲಿ ಹಣದ ಕೊರತೆಯಿಂದಾಗಿ ಈ ಯೋಜನೆಯನ್ನು ತೆಗೆದುಕೊಳ್ಳಲು ಸಾಧ್ಯವಾಗಿಲ್ಲ.

ಮಂಗಳೂರು ಮಹಾನಗರ ಪಾಲಿಕೆಯು ಈ ಯೋಜನೆಗೆ ಸಲಹೆಗಾರರ ಸೇವೆಯಲ್ಲಿ ಕಾರ್ಯಸಾಧ್ಯ ಅಧ್ಯಯನ, ಸರ್ವೆ, ತನಿಖೆ, ವಿನ್ಯಾಸ, ಅಂದಾಜು ಟೆಂಡರ್‌ಗಳ ಸಿದ್ಧತೆ ಮತ್ತು ಮೌಲ್ಯ ನಿರ್ಧಾರಣ ಒಳಗೊಂಡಂತೆ, ದಿನಾಂಕ: 29.9.2005ರ ಕಾರ್ಯಾದೇಶದ ಮೂಲಕ ತುಂಬೆಯ ಬಳಿ ಹೊಸ ಕಿಂಡಿ ಅಣೆಕಟ್ಟಿನ ನಿರ್ಮಾಣಕ್ಕೆ ಟೆಂಡರಿನ ದಾಖಲೆಗಳನ್ನು ಸಿದ್ದಪಡಿಸಿದೆ. ಆದರೆ, ಮಂಗಳೂರು ಮಹಾನಗರ ಪಾಲಿಕೆಯ ಯೋಜನೆ ಕುರಿತಂತೆ ನಿರ್ಣಯ ಕೈಗೊಂಡಿರುವುದಿಲ್ಲ.

ಮೆ॥ಸಿಕಾನ್ ಇವರು ಈ ಯೋಜನೆಯ ತಾಂತ್ರಿಕ ಕಾರ್ಯಸಾಧ್ಯ ವರದಿಯನ್ನು ಮಂಗಳೂರು ಮಹಾನಗರ ಪಾಲಿಕೆಯ ಪ್ರಸ್ತಾವನೆಯಂತೆ ಮಾಡಿಲ್ಲ. ಆದರೆ ಮಂಗಳೂರು ಮಹಾನಗರ ಪಾಲಿಕೆಯು ತನ್ನ ಕೌನ್ಸಿಲ್ ನಿರ್ಣಯದಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲು ಮತ್ತು ಸಂಪೂರ್ಣ ಯೋಜನೆಯ ವೆಚ್ಚವನ್ನು ಸರ್ಕಾರವೇ ಭರಿಸುವಂತೆ ನಿರ್ಣಯಿಸಿದೆ. ಈ ಯೋಜನೆಯ ಭಾಗಗಳು ಮತ್ತು ಅವುಗಳ ವೆಚ್ಚದ ವಿವರಗಳು ಈ ಕೆಳಕಂಡಂತಿವೆ.

| Sl. No. | Description of work | Amount (Rs. in crores) |
|---|---|---|
| 1. | Earthwork excavation for foundation | 1.00 |
| 2. | Providing Concrete work M 15 for foundation abutment left and right and well etc | 2.75 |
| 3. | Providing Concrete work M-20 for foundation abutment left and right Training wall etc | 8.00 |
| 4. | Providing Concrete work M-25 for Peir duct slabs, abutment Kerb etc | 8.75 |
| 5. | Providing Steel reinforcement charges | 3.00 |
| 6. | Providing Automatic Steel Crust Gate (Size 10 mtr x 5.5. mtr) Including Hoist Gandry Wheel Tracks, vertical and Horizontal Griders | 14.50 |
| 7. | Land Acquisition cost | 2.00 |
| | **Total** | **40.00** |

ಮಂಗಳೂರು ಮಹಾನಗರ ಪಾಲಿಕೆಯ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 64 ಎಂಎಂಸಿ 2005, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2007**

ಮಂಗಳೂರು ನಗರಕ್ಕೆ ಕುಡಿಯುವ ನೀರು ಸರಬರಾಜು ಮಾಡಲು ರೂ.40 ಕೋಟಿಗಳ (ನಲವತ್ತು ಕೋಟಿ ರೂಪಾಯಿಗಳು ಮಾತ್ರ) ಅಂದಾಜು ವೆಚ್ಚದಲ್ಲಿ ನೇತ್ರಾವತಿ ನದಿಗೆ ಅಡ್ಡವಾಗಿ ತುಂಬೆ ಗ್ರಾಮದ ಬಳಿ ಹೊಸದಾಗಿ ಕಿಂಡಿ ಅಣೆಕಟ್ಟನ್ನು ನಿರ್ಮಿಸುವ ಯೋಜನೆಗೆ ಪೂರ್ಣ ವೆಚ್ಚವನ್ನು ಭರಿಸಲು ಅನುಮೋದಿಸುತ್ತಾ ಪ್ರಾರಂಭಿಕವಾಗಿ 1/3ನೇ ಭಾಗದಷ್ಟು ಹಂಚಿಕೆಯ ಅನುದಾನವನ್ನು ಪ್ರಸಕ್ತ ಸಾಲಿನಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯ ವೆಚ್ಚದಲ್ಲಿ (outlay) ಒದಗಿಸಲಾಗುವುದು ಹಾಗೂ ಮಂಗಳೂರು ಮಹಾನಗರ ಪಾಲಿಕೆಯ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಇಂತಹ ಕಾಮಗಾರಿಯಲ್ಲಿ ವಿಶೇಷ ತಾಂತ್ರಿಕ ಪ್ರಾವಿಣ್ಯತೆಯನ್ನು ಹೊಂದಿರುವ ಸಂಸ್ಥೆಯನ್ನು ಗುರುತಿಸಿ ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ:ಆಇ 498 ವೆಚ್ಚ-9 2006 ದಿನಾಂಕ: 28.12.2006 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ಸಂಪತ್‌ಕುಮಾರ್**

ಪಿ.ಆರ್. 323

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ಕಂದಾಯ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಆರ್‌ಡಿ 478 ಟಿಆರ್‌ಎಂ 2006, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2007**

**ವಿಷಯ:** ಕರ್ನಾಟಕ ವಿಧಾನ ಮಂಡಲದ ಅಧೀನ ಶಾಸನ ಸಮಿತಿಯ 26ನೇ ವರದಿಯಲ್ಲಿ ಮಾಡಿರುವ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ಸೂಚನೆ.

ಕರ್ನಾಟಕ ವಿಧಾನ ಮಂಡಲದ ಅಧೀನ ಶಾಸನ ಸಮಿತಿಯು ತಮ್ಮ 26ನೇ ವರದಿಯಲ್ಲಿ ಈ ಕೆಳಕಂಡ ಅಂಶಗಳ ಬಗ್ಗೆ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತದೆ.

(ಎ) ನೈಸರ್ಗಿಕ ವಿಕೋಪ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ಬೆಳೆ ನಾಶವಾಗಿದ್ದರೆ, ಆ ನಿಟ್ಟಿನಲ್ಲಿ ಅಣೇವಾರಿ ಮಾಡಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲು ತಾಲ್ಲೂಕು ಮಟ್ಟದ, ಜಿಲ್ಲಾ ಮಟ್ಟದ ಕಂದಾಯ ಇಲಾಖೆಯ ಅಧಿಕಾರಿಗಳಿಂದ ಡಿಸೆಂಬರ್ 31 ರೊಳಗೆ ಸರ್ಕಾರಕ್ಕೆ ವರದಿಯನ್ನು ಕಳುಹಿಸಿಕೊಡಬೇಕೆಂಬ ಕಾಲಮಿತಿಯನ್ನು ಭೂ ಕಂದಾಯ ಅಧಿನಿಯಮ ಹಾಗೂ ನಿಯಮಗಳಲ್ಲಿ ಅಳವಡಿಸಬೇಕು.

(ಬಿ) ಹಾಗೂ ಅಣೇವಾರಿ ಮಾಡಿದ ಮಾಹಿತಿಯ ವರದಿಯನ್ನು ಸರ್ಕಾರಕ್ಕೆ ಕಾಲಮಿತಿಯೊಳಗೆ ಕಳುಹಿಸುವಲ್ಲಿ ವಿಫಲರಾದ ಅಧಿಕಾರಿಗಳ ವಿರುದ್ಧ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲು ಭೂಕಂದಾಯ ಅಧಿನಿಯಮದಲ್ಲಿ ಅವಕಾಶ ಕಲ್ಪಿಸಲು ಕ್ರಮ ಕೈಗೊಳ್ಳಬೇಕು.

(ಸಿ) ಅಣೇವಾರಿ ಮಾಡುವಾಗ ಇಲಾಖೆಗಳಲ್ಲಿ ಸಮನ್ವಯ ಇಲ್ಲದೆ ಇರುವುದನ್ನು ಸಮಿತಿಯು ಗಮನಿಸಿದೆ. ಸಮನ್ವಯ ವೈಫಲ್ಯತೆಯಿಂದ ಸಕಾಲದಲ್ಲಿ ಅಣೇವಾರಿ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸುವಲ್ಲಿ ವಿಳಂಬವಾಗಿರುವುದು ಸಮಿತಿಗೆ ತಿಳಿದು ಬಂದಿದೆ. ಈ ರೀತಿಯ ವಿಳಂಬವನ್ನು ಮುಂದೆ ತಪ್ಪಿಸಲು ಅನುಕೂಲವಾಗುವಂತೆ ಕೃಷಿ ಕಂದಾಯ ಹಾಗೂ ಸಾಂಖ್ಯಿಕ ಇಲಾಖೆಯವರು ಸಮನ್ವಯ ಇಟ್ಟುಕೊಂಡು ಅಣೇವಾರಿ ಕೆಲಸ ನಿರ್ವಹಿಸುವ ಹಿನ್ನೆಲೆಯಲ್ಲಿ ಸೂಕ್ತ ಸೂಚನೆ ನೀಡಬೇಕು.

(ಡಿ) ಸರ್ಕಾರವು ಫೆಬ್ರವರಿ ಅಂತ್ಯದೊಳಗೆ ಅಣೇವಾರಿ ಘೋಷಣೆ ಮಾಡಬೇಕು. ಈ ಬಗ್ಗೆ ನಿಯಮಕ್ಕೆ ಸೂಕ್ತ ನಿಯಮದಲ್ಲಿ ನಮೂದಿಸಬೇಕೆಂದು ಸಹಾ ಸೂಚಿಸಿದೆ.

ಮಾನ್ಯ ಕರ್ನಾಟಕ ವಿಧಾನ ಮಂಡಲದ ಅಧೀನ ಶಾಸನ ರಚನಾ ಸಮಿತಿಯ ಶಿಫಾರಸ್ಸಿನಂತೆ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಸಮಿತಿಯ ಶಿಫಾರಸ್ಸುಗಳನ್ನು ಈ ಕೆಳಕಂಡಂತೆ ಚಾಚು ತಪ್ಪದೆ ಅನುಷ್ಠಾನಗೊಳಿಸಲು ಈ ಮೂಲಕ ಸೂಚಿಸಲಾಗಿದೆ.

(ಅ) ನೈಸರ್ಗಿಕ ವಿಕೋಪ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ಬೆಳೆ ನಾಶವಾದರೆ ಆ ನಿಟ್ಟಿನಲ್ಲಿ ಅಣೇವಾರಿ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸಲು ತಾಲ್ಲೂಕು ಮಟ್ಟದ ಜಿಲ್ಲಾ ಮಟ್ಟದ ಕಂದಾಯ ಇಲಾಖೆಯ ಅಧಿಕಾರಿಗಳಿಂದ ಡಿಸೆಂಬರ್ 31 ರೊಳಗೆ ಸರ್ಕಾರಕ್ಕೆ ವರದಿಯನ್ನು ಕಳುಹಿಸಿಕೊಡಬೇಕೆಂಬ ಕಾಲಮಿತಿಯನ್ನು ನಿಗದಿಪಡಿಸಿದೆ.

(ಆ) ಅಣೇವಾರಿ ಮಾಡಿದ ಮಾಹಿತಿಯ ವರದಿಯನ್ನು ಸರ್ಕಾರಕ್ಕೆ ಕಾಲಮಿತಿಯೊಳಗೆ ಕಳುಹಿಸಲು ವಿಫಲರಾದ ಅಧಿಕಾರಿಗಳ ವಿರುದ್ಧ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳತಕ್ಕದ್ದು.

(ಇ) ಸರ್ಕಾರವು ಫೆಬ್ರವರಿ ಅಂತ್ಯದೊಳಗೆ ಅಣೇವಾರಿ ಘೋಷಣೆ ಮಾಡಬೇಕಾಗಿದೆ. ಇದಕ್ಕೆ ಸಂಬಂಧಪಟ್ಟ ಮಾಹಿತಿ/ವರದಿಗಳನ್ನು ಡಿಸೆಂಬರ್ 31 ರೊಳಗೆ ಕಡ್ಡಾಯವಾಗಿ ಸರ್ಕಾರಕ್ಕೆ ವರದಿಗಳನ್ನು ಕಳುಹಿಸತಕ್ಕದ್ದು.

(ಈ) ಅಣೇವಾರಿ ಮಾಡುವಾಗ ಇಲಾಖೆಗಳಲ್ಲಿ ಸಮನ್ವಯ ಇಲ್ಲದೇ ಇರುವುದನ್ನು ಗಮನಿಸಿ ಸಮನ್ವಯ ವೈಫಲ್ಯತೆಯಿಂದ ಸಕಾಲದಲ್ಲಿ ವಿಲೇವಾರಿ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸುವುದು ವಿಳಂಬವಾಗಿರುವುದನ್ನು ಸಮಿತಿಯ ಗಮನಕ್ಕೆ ಬಂದಿದ್ದು, ಈ ರೀತಿ ವಿಳಂಬವನ್ನು ಮುಂದೆ ತಪ್ಪಿಸಲು ಅನುಕೂಲವಾಗುವಂತೆ ಕೃಷಿ ಇಲಾಖೆ, ಕಂದಾಯ ಇಲಾಖೆ ಮತ್ತು ಸಾಂಖ್ಯಿಕ ಇಲಾಖೆಯವರು ಸಮನ್ವಯ ಇಟ್ಟುಕೊಂಡು ಅಣೇವಾರಿ ಕೆಲಸ ನಿರ್ವಹಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಹಾಗೂ ತಹಶೀಲ್ದಾರವರಿಗೆ ಸೂಚಿಸಿದೆ ಹಾಗೂ ಕೃಷಿ ಮತ್ತು ಸಾಂಖ್ಯಿಕ ಇಲಾಖೆಯು ತನ್ನ ಅಧೀನದಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಬೇಕೆಂದು ಸೂಚಿಸಿದೆ.

**ಎಸ್.ಎಂ. ಜಾಮ್‌ದಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

ಪಿ.ಆರ್. 324

## ಒಳಾಡಳಿತ ಸಚಿವಾಲಯ

**ಸರ್ಕಾರದ ಆದೇಶ ಸಂಖ್ಯೆ: ಒಇ 529 ಪಿಪಿಇ 2006, ಬೆಂಗಳೂರು, ದಿನಾಂಕ 13ನೇ ಫೆಬ್ರವರಿ 2007**

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ನೇಮಕಗೊಂಡ ಸಹಾಯಕ ಸರ್ಕಾರಿ ಅಭಿಯೋಜಕರ-ವ-ಸಹಾಯಕ ಸರ್ಕಾರಿ ವಕೀಲರ (ಸಮೂಹ-ಬಿ) ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ - ಆದೇಶ

**ಓದಲಗಿದೆ:**
1) ಸರ್ಕಾರದ ಅಧಿಸೂಚನೆ ನಂ. ಲಾ 225 ಪಿಪಿಇ 1991, ದಿನಾಂಕ 14.6.1994
2) ಸರ್ಕಾರದ ಅಧೀಸೂಚನೆ ನಂ. ಲಾ 97 ಪಿಪಿಇ 1997, ದಿನಾಂಕ 29.1.1998
3) ಮಹಾಲೇಖಪಾಲರ ಪತ್ರ ನಂ. XIII / ಜ4 / 2000-01 / 92-93, ದಿನಾಂಕ 13.12.2000.

ಮೇಲೆ ಓದಲಾದ (1) ಮತ್ತು (2)ರ ಸರ್ಕಾರದ ಅಧಿಸೂಚನೆಯಲ್ಲಿ ನೇಮಕಗೊಂಡ ಈ ಕೆಳಕಂಡ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ (ಸಮೂಹ–ಬಿ) ಜನ್ಮ ದಿನಾಂಕವನ್ನು ಅವರವರ ಹೆಸರುಗಳ ಮುಂದೆ ತೋರಿಸಿರುವಂತೆ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಗಳನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಶಾಸನ 1974ರ ಕಲಂ–3ರ ಉಪಕಲಂ–2ರ ಅನ್ವಯ ಸರ್ಕಾರವು ಒಪ್ಪಿರುತ್ತದೆ.

| ಕ್ರ. ಸಂ. | ಅಧಿಕಾರಿಯ ಹೆಸರು, ಪದನಾಮ, ನೇಮಕಗೊಂಡ ಸ್ಥಳ | ಸರ್ಕಾರವು ಒಪ್ಪಿರುವ ಜನ್ಮ ದಿನಾಂಕ |
|---|---|---|
| 1. | ಶ್ರೀ ಪಿ.ಆರ್. ಹೊಸಳ್ಳಿ ಮಠ್, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಜೆಎಂಎಫ್‌ಸಿ ನ್ಯಾಯಾಲಯ, ಬೀದರ್ | 01.06.1960 (ಒಂದನೇ ಜೂನ್ ಸಾವಿರದ ಒಂಬೈನೂರ ಅರವತ್ತು) |
| 2. | ಶ್ರೀ ಭೀಮಾಶಂಕರ ಅಂಬಲಗಿ, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕುಷ್ಟಗಿ | 23.07.59 (ಇಪ್ಪತ್ಮೂರನೇ ಜುಲೈ ಸಾವಿರದ ಒಂಬೈನೂರ ಐವತ್ತೊಂಬತ್ತು) |
| 3. | ಶ್ರೀಮತಿ ಜಿ. ಆರುಂಧತಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಗುಲ್ಬರ್ಗ | 21.04.1959(ಇಪ್ಪತ್ತೊಂದನೇ ಏಪ್ರಿಲ್ ಸಾವಿರದ ಒಂಬೈನೂರ ಐವತ್ತೊಂಬತ್ತು) |
| 4. | ಶ್ರೀ ಚೆನ್ನಪ್ಪ ಗುರುಶಾಂತಪ್ಪ ಹರಸೂರ, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುಮ್ನಾಬಾದ್ | 01.06.1962 (ಒಂದನೇ ಜೂನ್ ಸಾವಿರದ ಒಂಬೈನೂರ ಅರವತ್ತೆರಡು) |
| 5. | ಶ್ರೀ ಮಹಾಂತಪ್ಪ ಎ.ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜೆಎಂಎಫ್‌ಸಿ ನ್ಯಾಯಾಲಯ, ಗಲ್ಬರ್ಗ | 27.07.1958 (ಇಪ್ಪತ್ತೇಳನೇ ಜುಲೈ ಸಾವಿರದ ಒಂಬೈನೂರ ಐವತ್ತೆಂಟು) |
| 6. | ಶ್ರೀ ಡಿ.ನಾರಾಯಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜಮಖಂಡಿ | 20.05.1963 (ಇಪ್ಪತ್ತನೇ ಮೇ ಸಾವಿರದ ಒಂಬೈನೂರ ಅರವತ್ಮೂರು) |
| 7. | ಶ್ರೀ ಎನ್.ಆರ್.ಗಣೇಶ್ ಬಾಬು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಾಗಮಂಗಲ | 25.02.1968 (ಇಪ್ಪತ್ತೈದನೇ ಫೆಬ್ರವರಿ ಸಾವಿರದ ಒಂಬೈನೂರ ಅರವತ್ತೆಂಟು) |
| 8. | ಶ್ರೀ ಎಸ್.ಜಿ. ಹೊಸಮನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಾಗಲಕೋಟೆ | 17.01.1966 (ಹದಿನೇಳನೇ ಜನವರಿ ಸಾವಿರದ ಒಂಬೈನೂರ ಅರವತ್ತಾರು) |
| 9. | ಶ್ರೀ ಬಲಭೀಮ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಔರಾದ್ | 01.06.1960 (ಒಂದನೇ ಜೂನ್ ಸಾವಿರದ ಒಂಬೈನೂರ ಅರವತ್ತು) |
| 10. | ಶ್ರೀ ರಾಜಗೀರ ಬೀರಪ್ಪಾ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭಾಲ್ಕಿ | 18.07.1963 (ಹದಿನೆಂಟನೇ ಜುಲೈ ಸಾವಿರದ ಒಂಬೈನೂರ ಅರತ್ಮೂರು) |
| 11. | ಶ್ರೀ ಜಿ.ಸುದರ್ಶನ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಯಾದಗಿರಿ | 25.09.1962 (ಇಪ್ಪತ್ತೈದನೇ ಸೆಪ್ಟೆಂಬರ್ ಸಾವಿರದ ಒಂಬೈನೂರ ಅರವತ್ತೆರಡು) |

| ಕ್ರ. ಸಂ. | ಅಧಿಕಾರಿಯ ಹೆಸರು, ಪದನಾಮ, ನೇಮಕಗೊಂಡ ಸ್ಥಳ | ಸರ್ಕಾರವು ಒಪ್ಪಿರುವ ಜನ್ಮ ದಿನಾಂಕ |
|---|---|---|
| 12. | ಶ್ರೀ ಮುರಳೀಧರ ಕುಲಕರ್ಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಯಲಬುರ್ಗಾ | 04.03.1963 (ನಾಲ್ಕನೇ ಮಾರ್ಚ ಸಾವಿರದ ಒಂಬೈನೂರ ಅರವತ್ಮೂರು) |
| 13. | ಶ್ರೀ ವಿ.ಸಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಅಂಡ್ ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕೋಡಿ | 19.06.1962 (ಹತ್ತೊಂಬತ್ತನೇ ಜೂನ್ ಸಾವಿರದ ಒಂಬೈನೂರ ಅರವತ್ತೆರಡು) |
| 14. | ಶ್ರೀ ಕೆ.ಕೆ. ಕುಲಕರ್ಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಅಂಡ್ ಜೆಎಂಎಫ್‌ಸಿ ನ್ಯಾಯಾಲಯ, ನವಲಗುಂದ | 01.06.1962 (ಒಂದನೇ ಜೂನ್ ಸಾವಿರದ ಒಂಬೈನೂರ ಅರವತ್ತೆರಡು) |
| 15. | ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಅಂಡ್ ಜೆಎಂಎಫ್‌ಸಿ ನ್ಯಾಯಾಲಯ, ಹುಕ್ಕೇರಿ | 01.05.1964 (ಒಂದನೇ ಮೇ ಸಾವಿರದ ಒಂಬೈನೂರ ಅರವತ್ನಾಲ್ಕು) |
| 16. | ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಎಂ ಅಂಡ್ ಜೆಎಂಎಫ್‌ಸಿ ನ್ಯಾಯಾಲಯ, ಗದಗ | 21.07.1962 (ಇಪ್ಪತ್ತೊಂದನೇ ಜುಲೈ ಸಾವಿರದ ಒಂಬೈನೂರ ಅರವತ್ತೆರಡು) |
| 17. | ಶ್ರೀ ಎಸ್.ಆರ್.ಪಾಟೀಲ, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಅಂಡ್ ಜೆಎಂಎಫ್‌ಸಿ ನ್ಯಾಯಾಲಯ, ಹಿರೆಕೆರೂರ | 20.01.1961 (ಇಪ್ಪತ್ತನೇ ಜನವರಿ ಸಾವಿರದ ಒಂಬೈನೂರ ಅರವತ್ತೊಂದು) |
| 18. | ಶ್ರೀ ಎ.ಕೆ.ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಅಂಡ್ ಜೆಎಂಎಫ್‌ಸಿ ನ್ಯಾಯಾಲಯ, ಗೋಕಾಕ್ | 16.07.1959 (ಹದಿನಾರನೇ ಜುಲೈ ಸಾವಿರದ ಒಂಬೈನೂರ ಐವತ್ತೊಂಬತ್ತು) |
| 19. | ಶ್ರೀ ಎಸ್.ಆರ್.ಶಿಂಧೆ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ | 20.06.1969 (ಇಪ್ಪತ್ತನೇ ಜೂನ್ ಸಾವಿರದ ಒಂಬೈನೂರ ಅರವತ್ತೊಂಬತ್ತು) |
| 20. | ಶ್ರೀ ಹೆಚ್.ವಿ. ಕಾಳಪ್ಪನವರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನರಗುಂದ | 22.07.1959 (ಇಪ್ಪತ್ತೆರಡನೇ ಜುಲೈ ಸಾವಿರದ ಒಂಬೈನೂರ ಐವತ್ತೊಂಬತ್ತು) |
| 21. | ಶ್ರೀಮತಿ ಗಿರಿಜಾ ಎಸ್. ತಮ್ಮಿನಾಳ, ಸಹಾಯಕ ಸರ್ಕಾರಿ ಅಭಿಯೋಜಕರು, 4ನೇಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುಬ್ಬಳ್ಳಿ | 01.06.1968 (ಒಂದನೇ ಜೂನ್ ಸಾವಿರದ ಒಂಬೈನೂರ ಅರವತ್ತೆಂಟು) |
| 22. | ಶ್ರೀಮತಿ ಎಲ್.ಎಂ. ಯಳಸಂಗೀಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಜ್ಯೂ.ಡಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಜೇವರ್ಗಿ | 25.10.1965 (ಇಪ್ಪತ್ತೈದನೇ ಅಕ್ಟೋಬರ್ ಸಾವಿರದ ಒಂಬೈನೂರ ಅರವತ್ತೈದು) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 300

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾ. ಮತ್ತು ಸು ಮತ್ತು ಕಾಶಿಪೋಸಾ ಮತ್ತು ಅಭಿಯೋಗ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು, ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಪ್ರಸ್ತಾವನೆ ದಿನಾಂಕ:4.2.2006.
2. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 44 ಎಡಿಇ 2005, ದಿನಾಂಕ: 5.9.2005.
3. ಕಾರಣ ಕೇಳುವ ನೋಟೀಸ್ ದಿನಾಂಕ: 3.3.2006.
4. ಸರ್ಕಾರದ ಆದೇಶ ಸಂ: ಆರ್.ಡಿ. 44 ಎಡಿಇ 2005, ದಿನಾಂಕ: 22.4.2006.
5. ಶ್ರೀ ರುದ್ರೇಶ್ವರಯ್ಯ, ಇವರ ಸಮಜಾಯಿಷಿ ದಿನಾಂಕ:3.3.2006.

**ಪ್ರಸ್ತಾವನೆ:**

ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ, ಇವರು ನಂಜನಗೂಡಿನಲ್ಲಿ ತಹಶೀಲ್ದಾರರಾಗಿ ಕರ್ತವ್ಯ ಸಲ್ಲಿಸುತ್ತಿದ್ದ ಅವಧಿಯಲ್ಲಿ 4 ಆರೋಪಗಳ ಕುರಿತು ಕರ್ತವ್ಯ ಲೋಪ ಎಸಗುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1966ರ ನಿಯಮ 3(1) (i) (ii) (iii) ಅನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪದ ಮೇಲೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ. 1ರ ದಿನಾಂಕ: 4.2.2006ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಮೇಲೆ ಓದಲಾದ ಕ್ರ.ಸಂ. 2ರ ದಿನಾಂಕ: 5.9.2005ರ ಆದೇಶದಲ್ಲಿ ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ಇವರನ್ನು ಸೇರೆಯಿಂದ ಅಮಾನತ್ತುಗೊಳಿಸಿರುತ್ತದೆ. ತದನಂತರ, ಸರ್ಕಾರವು ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 22.4.2006ರ ಆದೇಶದಲ್ಲಿ ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿರುತ್ತದೆ. 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4 ರವರೆಗೆ) ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿ: 3.3.2006ರ ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (5)ರಲ್ಲಿ ಶ್ರೀ ರುದ್ರೇಶ್ವರಯ್ಯ, ಇವರು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ದದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖೆ ವಿಚಾರಣೆಯನ್ನು ಜರುಗಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 44 ಎಡಿಇ 2005, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2007**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ, ಪ್ರಸ್ತುತ ತಹಶೀಲ್ದಾರ್, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ) ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:1033, 9ನೇ 'ಬಿ' ಮೇನ್, 8ನೇ ಕ್ರಾಸ್, ಜುಡಿಷಿಯಲ್ ಲೇ-ಔಟ್, ಜಿಕೆವಿಕೆ ಪೋಸ್ಟ್, ಬೆಂಗಳೂರು-65 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11950ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ಮೈಸೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು, ವಿಚಾರಣೆಯನ್ನು ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ: 23.8.2005ರ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಶಿವಮೊಗ್ಗ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 302

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)